CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೩೯ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨, ೨೦೦೪ (ಭಾದ್ರಪದ ೧೧, ಶಕ ವರ್ಷ ೧೯೨೬) | ಸಂಚಿಕೆ ೩೬

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ನ್ಯಾಯಾಲಯದ ನಡವಳಿಕೆಗಳು

**ವಿಷಯ :** ಪಾವಗಡ ತಾಲ್ಲೂಕು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಗುಮ್ಮಘಟ್ಟ ಇದರ ಮಾಜಿ ವ್ಯವಸ್ಥಾಪಕರು ಶ್ರೀ ಡಿ. ಎನ್. ರಾಮಣ್ಣ ಇವರು ಸಂಘದ ಬ್ಯಾಂಕಿನ ಹಣ ರೂ. 408824-18 ಗಳ ದುರುಪಯೋಗದ ಬಗ್ಗೆ ಹಣದ ಭದ್ರತೆಗಾಗಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರ ಅಡಿಯಲ್ಲಿ ತೀರ್ಪು ಮುನ್ನ ಜಪ್ತಿ ಆದೇಶ.

**ಉಲ್ಲೇಖ :** ವ್ಯವಸ್ಥಾಪಕರು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿಯಮಿತ ಗುಮ್ಮಘಟ್ಟ ಪಾವಗಡ ತಾಲ್ಲೂಕು ಇವರ ಅರ್ಜಿ ದಿನಾಂಕ: 7.8.2004.

**ಪ್ರಸ್ತಾವನೆ:**

ಶ್ರೀ ಡಿ. ಎನ್. ರಾಮಣ್ಣ, ಮಾಜಿ ವ್ಯವಸ್ಥಾಪಕರು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಗುಮ್ಮಘಟ್ಟ, ಪಾವಗಡ ತಾಲ್ಲೂಕು ಇವರು ಸದರಿ ಬ್ಯಾಂಕಿನಲ್ಲಿ ರೂ. 408,824-18 ಹಣ ದುರುಪಯೋಗಪಡಿಸಿರುವುದಾಗಿ 2002-03ನೇ ಸಾಲಿನ ಆಡಿಟ್ ವರದಿಯಲ್ಲಿ ದೃಢಪಟ್ಟಿದ್ದು, ಈ ಹಣ ಮತ್ತು ಬಡ್ಡಿ ಹಾಗೂ ಇತರೆ ಖರ್ಚುಗಳ ವಸೂಲಾತಿಗೆ ಸಂಘದ ಹಾಲಿ ವ್ಯವಸ್ಥಾಪಕರು ಸಹಕಾರಿ ಸಂಘಗಳ ಕಾಯ್ದೆ 1959ರ ಕಲಂ 69ರ ಅಡಿಯಲ್ಲಿ ಅಧಿಭಾರ ಅರ್ಜಿಯನ್ನು ದಿನಾಂಕ: 7.7.2004 ರಂದು ಹೂಡಿರುತ್ತಾರೆ. ಈ ದಾವೆಯನ್ನು ದಿನಾಂಕ: 19.7.2004 ರಂದು ಕಡತದಲ್ಲಿ ದಾಖಲಿಸಿಕೊಂಡು ದಿನಾಂಕ: 5.8.2004 ರಿಂದ ವಿಚಾರಣೆ ಪ್ರಾರಂಭಿಸಿರುತ್ತದೆ. ಅರ್ಜಿದಾರರ ಸಂಘ/ ಬ್ಯಾಂಕ್ ಉಲ್ಲೇಖಿತ ಪತ್ರದ ಅನ್ವಯ ಶ್ರೀ ಡಿ. ಎನ್. ರಾಮಣ್ಣನವರು ದುರುಪಯೋಗಪಡಿಸಿರುವ ಹಣ ರೂ. 408824-18 ಗಳ ವಸೂಲಾತಿ ಕುರಿತು ಪ್ರತಿವಾದಿ ಡಿ. ಎನ್. ರಾಮಣ್ಣನವರ ಹೆಸರಿನಲ್ಲಿರುವ ಷೆಡ್ಯೂಲ್ ಆಸ್ತಿಯನ್ನು ದುರುದ್ದೇಶದಿಂದ ಬೇರೆಯವರಿಗೆ ವರ್ಗಾವಣೆ ಅಥವಾ ಪರಭಾರೆ ಮಾಡುವುದರ ಮೂಲಕ ದುರುಪಯೋಗದ ಹಣ ಪಾವತಿಸುವಲ್ಲಿ ತನ್ನ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳಬಹುದೆಂದು ಶಂಕಿಸಿ ಸಹಕಾರ ಕಾಯಿದೆ ಕಲಂ 103ರ ಅಡಿಯಲ್ಲಿ ಅರ್ಜಿ ಸಲ್ಲಿಸುತ್ತಾ ಕಲಂ 69ರ ಅಧಿಭಾರ ಅರ್ಜಿ ವಿಚಾರಣಾ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿರುತ್ತಾರೆ. ಈ ನ್ಯಾಯಾಲಯದ ವಿಚಾರಣೆಯಲ್ಲಿರುವ ಅಧಿಭಾರ ಅರ್ಜಿ ದಾವೆ ನಂಬರ್ 4/2004-05 ರ ಅಂತಿಮ ತೀರ್ಪು ಕಾಯ್ದಿರಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಅನ್ವಯ ಈ ನ್ಯಾಯಾಲಯದ ದಾವೆಯ ಐತೀರ್ಪು ಪೂರ್ವ, ಷೆಡ್ಯೂಲ್ ಆಸ್ತಿಯನ್ನು ಜಪ್ತಿಮಾಡಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

### ಜಪ್ತಿ ಆದೇಶ

**ನಂ. ಸಸಂಸನಿ:33/ಎಬಿಎನ್/ಡಿಡಿಎಸ್/25/2004-05 ದಿನಾಂಕ: 7ನೇ ಆಗಸ್ಟ್ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಅನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿಎಂಡಬ್ಲ್ಯೂ:69/ಸಿಎಲ್ಎಸ್:2001 ದಿನಾಂಕ: 21.11.2001ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿ ಶ್ರೀ ಟಿ. ಮುರಳೀಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಪ್ರಸ್ತಾವನೆಯಲ್ಲಿ

ವಿವರಿಸಿರುವಂತೆ ಶ್ರೀ ಡಿ. ಎನ್. ರಾಮಣ್ಣ, ಮಾಜಿ ಕಾರ್ಯದರ್ಶಿ/ವ್ಯವಸ್ಥಾಪಕ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಗುಮ್ಮಘಟ್ಟ, ಪಾವಗಡ ತಾಲ್ಲೂಕು ಇವರ ಹೆಸರಿನಲ್ಲಿರುವ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುವ ದಾವೆಯ ಅಂತಿಮ ತೀರ್ಪಿಗೆ ಒಳಪಟ್ಟು ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಿರುತ್ತೇನೆ.

ಶ್ರೀ ಡಿ. ಎನ್. ರಾಮಣ್ಣ ಇವರ ಈ ಕೆಳಗೆ ವಿವರಿಸಿರುವ ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೆ ಅಥವಾ ಸ್ವತ್ತಿಗೆ ತತ್ಸಮಾನವಾದ ನಗದು ಭದ್ರತೆ ನೀಡುವವರೆಗೆ ವಿಲೇವಾರಿ ಮಾಡುವುದೇ ಆಗಲಿ, ಪರಭಾರೆ ಮಾಡುವುದಾಗಲಿ ಅಥವಾ ವರ್ಗಾಯಿಸುವುದೇ ಆಗಲಿ ಮಾಡುವಂತಿಲ್ಲ. ಒಂದು ವೇಳೆ ಈ ಆದೇಶವನ್ನು ನಿರ್ಲಕ್ಷಿಸಿ ಯಾರಾದರೂ ಈ ಸ್ವತ್ತುಗಳನ್ನು ಖರೀದಿಸಿದಲ್ಲಿ, ಪರಭಾರೆ ಮಾಡಿದಲ್ಲಿ ಅಥವಾ ಇನ್ನು ಯಾವುದೇ ವಿಧದಲ್ಲಿ ವರ್ಗಾಯಿಸಿಕೊಂಡಲ್ಲಿ.

ಅದು ಸಿಂಧುವಾಗುವುದಿಲ್ಲವೆಂದು ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

ದುರುಪಯೋಗದಾರರು ಈ ಜಪ್ತಿ ಆದೇಶದ ವ್ಯಾಪ್ತಿಯಿಂದ ಹೊರಬರಲು ಇಚ್ಛಿಸಿದಲ್ಲಿ ಜಪ್ತಿಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯವು ಸರಿಯೆಂದು ಭಾವಿಸುವ ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಹೆಸರಿನಲ್ಲಿ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಮಧುಗಿರಿ ಶಾಖೆ, ಮಧುಗಿರಿ ಈ ಬ್ಯಾಂಕಿನಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ಮೂಲ ಚಲನ್ ಪ್ರತಿಯನ್ನು ದಿನಾಂಕ: 10.9.2004 ರ ಒಳಗೆ ಈ ನ್ಯಾಯಾಲಯಕ್ಕೆ ಹಾಜರ್‌ಪಡಿಸುವುದರ ಮೂಲಕ ಜಪ್ತಿ ಆದೇಶದಿಂದ ಹೊರಗುಳಿಯಬಹುದೆಂದು ಸಹ ತಿಳಿಸಲಾಗಿದೆ. ಸದರಿ ನಿಗದಿತ ಅವಧಿಯೊಳಗೆ ನಗದು ಭದ್ರತೆ ನೀಡಲು ವ್ಯಾಜ್ಯದ ಎದುರು ಅರ್ಜಿದಾರರು ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತಿ ಆದೇಶ ಸ್ಥಿರಗೊಳ್ಳುವುದಲ್ಲದೇ ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

**ಷೆಡ್ಯೂಲ್**

| ಕ್ರ. ಸಂ. | ಖಾತೆದಾರರ ಹೆಸರು ಮತ್ತು ವಿಳಾಸ | ಖಾತೆ ನಂ. | ಸರ್ವೆ ನಂ. | ವಿಸ್ತೀರ್ಣ | ತರಹೆ | ಚಕ್ಕುಬಂದಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1) | ಡಿ. ಎನ್. ರಾಮಣ್ಣ ಬಿನ್ ಡಿ. ಎಸ್. ನಾರಾಯಣರಾವ್ ದೊಮ್ಮತಮರಿ ಗ್ರಾಮ ಕಸಬಾ ಹೋಬಳಿ, ಪಾವಗಡ ತಾಲ್ಲೂಕು. | 375 | 60 | 1.06 | ಭಾಗಾಯ್ತು | ಪೂರ್ವ: ಹಳ್ಳ<br>ಪಶ್ಚಿಮ: ರಾಧಮ್ಮ<br>ಉತ್ತರ: ಆಂಧ್ರಗಡಿ<br>ದಕ್ಷಿಣ: ರಘುಪತಿರಾವ್ |
| 2) | -ಡಿಟೋ ವಿಳಾಸ- | 375 | 202/1 | 2.20 | ಖುಷ್ಕಿ | ಪೂರ್ವ: ವೆಂಕಾರೆಡ್ಡಿ ಜಮೀನು<br>ಪಶ್ಚಿಮ: ಪ್ರಾಣೇಶ್ ಜಮೀನು<br>ಉತ್ತರ: ಬಾವಿ ಮನೆ ಯರ್ರಪ್ಪ ಜಮೀನು<br>ದಕ್ಷಿಣ: ವೆಂಕಟೇಶ್ ಜಮೀನು |
| 3) | -ಡಿಟೋ- | 234 | 184/1 | 2.07 | ಖುಷ್ಕಿ | ಪೂರ್ವ: ಪಾವಗಡ ರಸ್ತೆ<br>ಪಶ್ಚಿಮ: ಎಸ್. ಸಿ. ಕಾಲೋನಿ<br>ಉತ್ತರ: ಸತ್ಯಣ್ಣ ಜಮೀನು<br>ದಕ್ಷಿಣ: ಎಸ್.ಸಿ. ಕಾಲೋನಿ |
| 4) | ಡಿ. ಎನ್. ರಾಮಣ್ಣ ಬಿನ್ ಡಿ. ಎಸ್. ನಾರಾಯಣರಾವ್ ದೊಮ್ಮತಮರಿ ಗ್ರಾಮ ಕಸಬಾ ಹೋಬಳಿ, ಪಾವಗಡ ತಾಲ್ಲೂಕು. | 375 | 77/1 | 1.12 | ತರಿ | ಪೂರ್ವ: ಹನುಮಂತರಾವ್ ಜಮೀನು<br>ಪಶ್ಚಿಮ: ರಾಘವೇಂದ್ರರಾವ್ ಜಮೀನು<br>ಉತ್ತರ: ಕೊಂಡಾರೆಡ್ಡಿ ಜಮೀನು<br>ದಕ್ಷಿಣ: ರಾಘವೇಂದ್ರರಾವ್ ಜಮೀನು |
| 5) | -ಡಿಟೋ- | 24/ಎ | - | - | ವಾಸದ ಮನೆ | ಪೂರ್ವ: ಪ್ರಾಣೇಶ್‌ರಾವ್<br>ಪಶ್ಚಿಮ: ರಸ್ತೆ<br>ಉತ್ತರ: ರಸ್ತೆ<br>ದಕ್ಷಿಣ: ಶ್ರೀನಿವಾಸ್‌ರಾವ್ |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ: 07.08.2004 ರಂದು ನೀಡಿರುತ್ತೇನೆ.

**ಟಿ. ಮುರಳಿಕೃಷ್ಣಪ್ಪ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

ಪಿ.ಆರ್. 1166

**DEPARTMENT OF CO-OPERATION**
**OFFICE OF THE ASSISTANT REGISTRAR OF CO-OPERATIVE SOCIETIES, I CIRCLE, CHAMARAJPET, BANGALORE-560 018**
**SALE CONFIRMATION OF IMMOVABLE PROPERTY IN CEP No. 200/2003-04 AND DECREE NO. DRBI/DIS/2755/1999-2000, DT.10/08/2001, RULES 38 (7) OF THE K.C.S. RULES 1960**

This is to certified that Smt. R. Shanthi W/o Ramalingam No. 1/2, 3rd Cross, Gopalapura, Magadi Road, Bangalore-560 023, having purchased the right title and interest at public auction held by the Sale officer, Janatha Seva Co-operative Bank Ltd., No. 14, Rajatha Bhavan, Ist Main Road, RPC Layout, Vijayanagar, Bangalore-560 040, on 05.02.2004. The under mentioned scheduled property sold for this arrears in CEP No. 200/2003-04 and Decree No. DRBI/DIS/2755/1999-00 due from Sri. Altaf Pasha residing at No. 13/3, 3rd cross, Gopalapura, behind Minerva Mill, Magadi Road, Bangalore-560 023, being the owner's of the under mentioned schedule property and the highest bid being stood in the name Smt. R. Shanthi W/o Sri. Ramalingam, residing at No. 1/2, 3rd Cross, Gopalapura, behind Minerva Mill, Magadi Road, Bangalore-560 023. The Right title and interest of the scheduled property have been this day registered in the name of Smt. R. Shanthi Wo. Sri Ramalinga, No. 1/2, 3rd cross, behind Minerva Mill, Magadi Road, Bangalore-560023.

**SCHEDULE**

| Name of the District | Name of the Taluk | Village | Description of the Property |
|---|---|---|---|
| Bangalore | Bangalore South Taluk Gandhi Nagar Sub-Registrar | No. 13/3, 3rd Cross, Gopalapura behind Minerva Mill, Magadi Road, Bangalore-560023 | East to West-12.00 Ft. North to South-50.00 Ft. |

| Boundaries | Date of Sale | Bid Amount | Remarks |
|---|---|---|---|
| **East by :** Gangappa gundaraj property<br>**West by:** S. Ramalingam Property<br>**North by:** Thirunavakaraj's Property<br>**South by:** Road | 5.2.2004 | 3,72,000-00 | Sale of Property have been confirmed vide their office order no. ARB/44/CON/ 1) 04-05 dated 21.4.2004 |

Given under my hand seal on this day of 21st April 2004

Assistant Registrar of Co-operative Societies,
PR-1168 I Circle, Chamarajpet, Bangalore-560 018.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಅಧಿಸೂಚನೆ**

**ನಂ. ಎಲ್‌ಆರ್‌ಎಫ್ (ಕಲಂ 109) ಸಿಆರ್:02:2004-05 ದಿನಾಂಕ: 9ನೇ ಆಗಸ್ಟ್ 2004**

ಬಂಗಾರಪೇಟೆ ತಾಲ್ಲೂಕು ಕಸಬಾ ಹೋಬಳಿ ಮರವಹಳ್ಳಿ ಗ್ರಾಮದ ಸ.ನಂ. 29:1 ರಲ್ಲಿ 1-25 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ (ಟಿ.ಟಿ.ಐ ಸ್ಥಾಪನೆಗಾಗಿ) ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಅಡಿಯಲ್ಲಿ ಅನುಮತಿ ನೀಡಲು ಕೋರಿ ಕಾರ್ಯದರ್ಶಿ, ಜ್ಞಾನೇಶ್ವರಿ ಎಜುಕೇಷನಲ್ ಸೊಸೈಟಿ, ಮೂತನೂರು ಗ್ರಾಮ ಬೂದಿಕೋಟೆ ಹೋಬಳಿ ಬಂಗಾರಪೇಟೆ ತಾಲ್ಲೂಕು ರವರು ನಮೂನೆ 15ಎ ರಲ್ಲಿ ಅರ್ಜಿಯನ್ನು ಸಲ್ಲಿಸಿ ತತ್ಸಂಬಂಧ ಹಾಜರುಪಡಿಸಿರುವ ದಾಖಲೆಗಳಿಗೆ ಸಂಬಂಧಿಸಿದಂತೆ ತಹಶೀಲ್ದಾರ್ ಬಂಗಾರಪೇಟೆ ತಾಲ್ಲೂಕು ರವರು ಪತ್ರ ಸಂಖ್ಯೆ LRF CR 4/2004-05 ದಿನಾಂಕ: 26.07.2004 ರಂತೆ ಕಡತ ತಯಾರಿಸಿ ಸಲ್ಲಿಸಿರುವ ಮಾಹಿತಿಯನ್ನು ಅನುಸರಿಸಿ ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರು ಪತ್ರ ಸಂ. ಎಲ್‌ಆರ್‌ಎಫ್: ಸಿಆರ್:4: 2004-05 ದಿನಾಂಕ: 29.07.2004 ರಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಅರ್ಜಿದಾರರಿಗೆ ಮೇಲ್ಕಂಡ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಕಲಂ 109 ರಂತೆ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಮರವಹಳ್ಳಿ ಗ್ರಾಮದ ಸ.ನಂ. 29/1ರ ಜಮೀನು 1-25 ಎಕರೆ ವಿಸ್ತೀರ್ಣವಿದ್ದು ಈ ಜಮೀನಿನ ಖಾತೆ ಎಂ. ವೆಂಕಟೇಶಪ್ಪ ಬಿನ್ ಮುನಿವೆಂಕಟಪ್ಪ ಎಂಬುವರ ಹೆಸರಿನಲ್ಲಿದ್ದು ಈ ಜಮೀನು ಸದರಿಯವರಿಗೆ ದ.ರಿ. ನಂ. 4953: 2000-01 ದಿನಾಂಕ: 15.03.2001 ರಂತೆ ಕ್ರಯದ ಮೂಲಕ ಬಂದಿದ್ದು ಎಂಆರ್ ನಂ. 8:2000-01 ರಂತೆ ಖಾತೆಯಾಗಿರುತ್ತೆ. ಮೇಲ್ಕಂಡ ಜಮೀನನ್ನು ಅರ್ಜಿದಾರರಿಗೆ ದಾನವಾಗಿ ನೀಡಲು ಒಪ್ಪಿ ದಿನಾಂಕ: 25.6.2004 ರಂದು ದಾನದ ಕರಾರು ಪತ್ರವನ್ನು ಬರೆಸಿಕೊಟ್ಟಿರುತ್ತಾರೆ. ಮೇಲ್ಕಂಡ ಜಮೀನು ಕರ್ನಾಟಕ ಭೂ ಸುಧಾರಣೆ ಕಾಯ್ದೆ, ಕರ್ನಾಟಕ ಭೂ ಮಂಜೂರಾತಿ ಕಾಯ್ದೆ/ ನಿಯಮಗಳು: ಇನಾಂ ರದ್ದಿಯಾತಿ ಕಾಯ್ದೆ ಮತ್ತು ಪಿ.ಟಿ.ಸಿ.ಎಲ್. ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಹಾಗೂ ಮೇಲ್ಕಂಡ ಜಮೀನಿನ ಬಗ್ಗೆ ಯಾರೂ ಗೇಣಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಸದರಿ ಜಮೀನಿನಲ್ಲಿ ಹೈ ಪವರ್ ಟೆನ್ಷನ್ ಲೈನ್ ಹಾದು ಹೋಗಿರುವುದಿಲ್ಲ. ಹಾಗೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಉಳಿಸಿಕೊಳ್ಳಬೇಕಾದ ಬಾಬುಗಳು ಯಾವುದೂ ಇರುವುದಿಲ್ಲ.

ಜ್ಞಾನೇಶ್ವರಿ ಶಿಕ್ಷಣ ಸಂಸ್ಥೆಯು ಹಿಂದೆ ಶ್ರೀ ಬಸವೇಶ್ವರ ಸೇವಾ ಸಮಿತಿ ಮೂತನೂರು ಗ್ರಾಮ ಎಂಬುದಾಗಿ ಕೋಲಾರ ಜಿಲ್ಲಾ ಸಂಘಗಳ ನೋಂದಣಾಧಿಕಾರಿಗಳು ಕೋಲಾರ ರವರ ಕಛೇರಿಯಲ್ಲಿ ನಂ. 199:1990-91 ದಿನಾಂಕ: 21.12.1991 ರಂದು ನೋಂದಾವಣೆಯಾಗಿದ್ದು ನಂತರ ಜ್ಞಾನೇಶ್ವರಿ ಎಜುಕೇಷನಲ್ ಸೊಸೈಟಿ ಎಂಬುದಾಗಿ ದಿನಾಂಕ: 6.11.2003 ರಂದು ತಿದ್ದುಪಡಿಯಾಗಿರುತ್ತದೆ. ಸರ್ಕಾರಿ ಆದೇಶ ನಂ. ಇಡಿ 316 ಪಿಟಿಐ 2004 ಬೆಂಗಳೂರು ದಿನಾಂಕ: 12.3.2004 ರಂತೆ ಅರ್ಜಿದಾರರಿಗೆ ಶಿಕ್ಷಕರ ತರಬೇತಿ ಕೇಂದ್ರವನ್ನು 45 (ನಲವತ್ತೈದು) ವಿದ್ಯಾರ್ಥಿಗಳ ಸಂಖ್ಯಾ ಬಲದೊಂದಿಗೆ ನಡೆಸಲು ನಿರಾಕ್ಷೇಪಣಾ ಪತ್ರ ನೀಡಿರುತ್ತೆ. ಅರ್ಜಿದಾರರು ನಮೂನೆ 15ಎ ರೊಂದಿಗೆ ಹಾಜರುಪಡಿಸಿರುವ ದಾಖಲೆಗಳು ಪ್ರಸ್ತಾಪಿತ ಉದ್ದೇಶಕ್ಕೆ ಪೂರಕವಾಗಿರುತ್ತದೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಂತೆ ಶೈಕ್ಷಣಿಕ ಉದ್ದೇಶಗಳಿಗಾಗಿ ನಾಲ್ಕು ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) ಕ್ಕೆ ತಿದ್ದುಪಡಿಯನ್ನು ತಂದಿದ್ದು ಇದರಂತೆ ಕೃಷಿ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಎರಡು ಯೂನಿಟ್‌ಗಳಿಗೆ ಮೀರದಂತೆ ಕ್ರಯಕ್ಕೆ: ದಾನಕ್ಕೆ: ಗುತ್ತಿಗೆಗೆ ಪಡೆಯಲು ಅನುಮತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II)ಕ್ಕೆ ಅನುಗುಣವಾಗಿರುತ್ತೆ.

ಮೇಲ್ಕಂಡ ಅಂಶಗಳಡಿಯಲ್ಲಿ ಬಂಗಾರಪೇಟೆ ತಾಲ್ಲೂಕು ಕಸಬಾ ಹೋಬಳಿ ಮರವಹಳ್ಳಿ ಗ್ರಾಮದ ಸ.ನಂ. 29/1ರ 2 ಎಕರೆ 25 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ (ಟಿ.ಟಿ.ಐ ಸ್ಥಾಪಿಸಲು) ದಾನವಾಗಿ ಪಡೆಯಲು ಕಾರ್ಯದರ್ಶಿ, ಜ್ಞಾನೇಶ್ವರಿ ಎಜುಕೇಷನಲ್ ಸೊಸೈಟಿ (ರಿ) ಮೂತನೂರು ಗ್ರಾಮ ಬಂಗಾರಪೇಟೆ ತಾಲ್ಲೂಕು ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿಯಲ್ಲಿ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ: ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ: ಓಡಿಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಸದರಿ ಜಮೀನಿನ ಪೂರ್ವಕ್ಕೆ: ರಸ್ತೆ ಪಶ್ಚಿಮಕ್ಕೆ: ರೈಲ್ವೆ ಲೈನ್ ಗಡಿ ಇರುವುದರಿಂದ ನಿಯಮಾನುಸಾರ ಅಗತ್ಯವಿರುವ ರಸ್ತೆ ಮಾರ್ಜಿನ್ ಬಿಡತಕ್ಕದ್ದು. ಹಾಗೂ ಕೆರೆ ಮತ್ತು ಸ್ಮಶಾನ ಇರುವುದರಿಂದ ಇವುಗಳಿಗೆ ಯಾವುದೇ ಧಕ್ಕೆಯಾಗದಂತೆ ನೋಡಿಕೊಳ್ಳುವುದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
7. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (I) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

**ಬಿ. ಎಸ್. ರಾಮಪ್ರಸಾದ್**
ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

ಪಿ.ಆರ್.1169

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

## ಅಧಿಸೂಚನೆ

### ನಂ. ಎಲ್‌ಆರ್‌ಎಫ್ (ಕಲಂ 109) ಸಿಆರ್:07:2004-05 ದಿನಾಂಕ: 9ನೇ ಆಗಸ್ಟ್ 2004

ಶ್ರೀನಿವಾಸಪುರ ತಾಲ್ಲೂಕು ಕಸಬಾ ಹೋಬಳಿ ಕೇತಗಾನಹಳ್ಳಿ ಗ್ರಾಮದ ಸ.ನಂ. 91:15 ಬಿ ರಲ್ಲಿ 2-00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ (ಶಿಕ್ಷಕರ ತರಬೇತಿ ಸಂಸ್ಥೆ ಸ್ಥಾಪನೆಗಾಗಿ) ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಅಡಿಯಲ್ಲಿ ಅನುಮತಿ ನೀಡಲು ಕೋರಿ ಅಧ್ಯಕ್ಷರು ಶ್ರೇಯಸ್ ಎಜುಕೇಷನಲ್ ಟ್ರಸ್ಟ್ (ರಿ) ಶ್ರೀನಿವಾಸಪುರ ರವರು ನಮೂನೆ 15ಎ ರಲ್ಲಿ ಅರ್ಜಿಯನ್ನು ಸಲ್ಲಿಸಿ ತತ್ಸಂಬಂಧ ಹಾಜರುಪಡಿಸಿರುವ ದಾಖಲೆಗಳಿಗೆ ಸಂಬಂಧಿಸಿದಂತೆ ತಹಶೀಲ್ದಾರ್ ಶ್ರೀನಿವಾಸಪುರ ತಾಲ್ಲೂಕು ರವರು ಪತ್ರ ಸಂಖ್ಯೆ: ALN CR1/ 2004-05 ದಿನಾಂಕ: 03.08.2004 ರಂತೆ ಕಡತ ತಯಾರಿಸಿ ಸಲ್ಲಿಸಿರುವ ಮಾಹಿತಿಯನ್ನು ಅನುಸರಿಸಿ ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರು ಪತ್ರ ಸಂ. ಎಲ್‌ಆರ್‌ಎಫ್: ಸಿಆರ್ 7: 2004-05 ದಿನಾಂಕ: 04.08.2004 ರಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಅರ್ಜಿದಾರರಿಗೆ ಮೇಲ್ಕಂಡ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ರ ಕಲಂ 109 ರಂತೆ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಕೇತಗಾನಹಳ್ಳಿ ಗ್ರಾಮದ ಸ.ನಂ. 91/15 ಬಿ ರ 2-00 ಎಕರೆ ಜಮೀನಿನ ಖಾತೆಯು ಶ್ರೀ ನಾರಾಯಣಸ್ವಾಮಿ ಬಿನ್ ನಲ್ಲಪ್ಪ ಎಂಬುವವರ ಹೆಸರಿನಲ್ಲಿದ್ದು ಈ ಜಮೀನು ಸದರಿಯವರಿಗೆ ದ.ರಿ. ನಂ. 1445:2003-04 ದಿನಾಂಕ: 8.9.2003 ರಂತೆ ಕ್ರಯದ ಮೂಲಕ ಬಂದಿದ್ದು ಎಂಆರ್ ನಂ. 7: 2003-04 ರಂತೆ ಖಾತೆಯಾಗಿರುತ್ತೆ. ಮೇಲ್ಕಂಡ ಜಮೀನನ್ನು ಅರ್ಜಿದಾರರಿಗೆ ಕ್ರಯಕ್ಕೆ ನೀಡಲು ಒಪ್ಪಿ ದಿನಾಂಕ: 11.6.2004 ರಂದು ಕ್ರಯದ ಕರಾರು ಪತ್ರವನ್ನು ಬರೆಸಿಕೊಟ್ಟಿರುತ್ತಾರೆ. ಮೇಲ್ಕಂಡ ಜಮೀನು ಕರ್ನಾಟಕ ಭೂ ಸುಧಾರಣೆ ಕಾಯ್ದೆ: ಇನಾಂ ರದ್ದಿಯಾತಿ ಕಾಯ್ದೆ ಮತ್ತು ಪಿ.ಟಿ.ಸಿ.ಎಲ್. ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮತ್ತು ಕರ್ನಾಟಕ ಭೂ ಮಂಜೂರಾತಿ ಕಾಯ್ದೆಯು ಉಲ್ಲಂಘನೆಯಾಗಿರುವುದಿಲ್ಲ. ಹಾಗೂ ಮೇಲ್ಕಂಡ ಜಮೀನಿನ ಬಗ್ಗೆ ಯಾರೂ ಗೇಣಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಸದರಿ ಜಮೀನಿನಲ್ಲಿ ಹೈ ಪವರ್ ಟೆನ್‌ಷನ್ ಲೈನ್ ಹಾದು ಹೋಗಿರುವುದಿಲ್ಲ. ಹಾಗೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಉಳಿಸಿಕೊಳ್ಳಬೇಕಾದ ಬಾಬುಗಳು ಯಾವುದೂ ಇರುವುದಿಲ್ಲ.

ಶ್ರೇಯಸ್ ಎಜುಕೇಷನಲ್ ಟ್ರಸ್ಟ್ (ರಿ) ಶ್ರೀನಿವಾಸಪುರ, ಈ ಟ್ರಸ್ಟ್ ಉಪ ನೋಂದಣಾಧಿಕಾರಿಗಳು ಶ್ರೀನಿವಾಸಪುರ ರವರ ಕಾರ್ಯಾಲಯದಲ್ಲಿ ನಂ. 43:84-85 ದಿನಾಂಕ: 16.11.84 ರಂತೆ ನೋಂದಾವಣೆಯಾಗಿರುತ್ತೆ. ಸರ್ಕಾರಿ ಆದೇಶ ನಂ. ಇಡಿ 32 ಪಿಟಿಐ 85 ಬೆಂಗಳೂರು ದಿನಾಂಕ: 14.2.1985 ರಂತೆ ಅರ್ಜಿದಾರರಿಗೆ ಶಿಕ್ಷಕರ ತರಬೇತಿ ಕೇಂದ್ರವನ್ನು 40 (ನಲವತ್ತು) ವಿದ್ಯಾರ್ಥಿಗಳ ಸಂಖ್ಯಾ ಬಲದೊಂದಿಗೆ ನಡೆಸಲು ನಿರಾಕ್ಷೇಪಣಾ ಪತ್ರ ನೀಡಿರುತ್ತೆ. ಸದರಿ ಸಂಸ್ಥೆಯನ್ನು ಚಿಂತಾಮಣಿಯಿಂದ ಶ್ರೀನಿವಾಸಪುರಕ್ಕೆ ಸ್ಥಳಾಂತರಿಸುವುದರ ಬಗ್ಗೆ ಸರ್ಕಾರದ ಪತ್ರ ನಂ. ಇಡಿ 277 ಪಿಟಿಐ 85 ದಿನಾಂಕ: 9.1.86 ರಂತೆ ಸರ್ಕಾರದ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ, ಬೆಂಗಳೂರು ರವರು ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರವರಿಗೆ ಪತ್ರವನ್ನು ಬರೆದಿರುತ್ತಾರೆ. ಅರ್ಜಿದಾರರು ನಮೂನೆ 15ಎ ರೊಂದಿಗೆ ಹಾಜರುಪಡಿಸಿರುವ ದಾಖಲೆಗಳು ಪ್ರಸ್ತಾಪಿತ ಉದ್ದೇಶಕ್ಕೆ ಪೂರಕವಾಗಿರುತ್ತೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಂತೆ ಶೈಕ್ಷಣಿಕ ಉದ್ದೇಶಗಳಿಗಾಗಿ ನಾಲ್ಕು ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) ಕ್ಕೆ ತಿದ್ದುಪಡಿಯನ್ನು ತಂದಿದ್ದು ಇದರಂತೆ ಕೃಷಿ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಎರಡು ಯೂನಿಟ್‌ಗಳಿಗೆ ಮೀರದಂತೆ ಕ್ರಯಕ್ಕೆ: ದಾನಕ್ಕೆ: ಗುತ್ತಿಗೆಗೆ ಪಡೆಯಲು ಅನುಮತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II)ಕ್ಕೆ ಅನುಗುಣವಾಗಿರುತ್ತೆ.

ಮೇಲ್ಕಂಡ ಅಂಶಗಳಡಿಯಲ್ಲಿ ಶ್ರೀನಿವಾಸಪುರ ತಾಲ್ಲೂಕು ಕಸಬಾ ಹೋಬಳಿ ಕೇತಗಾನಹಳ್ಳಿ ಗ್ರಾಮದ ಸ.ನಂ. 91/15ಬಿ ರ 2.00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ (ಟಿ.ಟಿ.ಐ ಸ್ಥಾಪಿಸಲು)ಕ್ರಯಕ್ಕೆ ಪಡೆಯಲು ಅಧ್ಯಕ್ಷರು ಶ್ರೇಯಸ್ ಎಜುಕೇಷನಲ್ ಟ್ರಸ್ಟ್ (ರಿ) ಶ್ರೀನಿವಾಸಪುರ ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II)ರಡಿಯಲ್ಲಿ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ: ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ: ಓಡಿಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಸದರಿ ಜಮೀನು ಶ್ರೀನಿವಾಸಪುರ ಮುಳಬಾಗಿಲು ರಸ್ತೆಗೆ ಹೊಂದಿಕೊಂಡಿರುವುದರಿಂದ ನಿಯಮಾನುಸಾರ ಅಗತ್ಯವಿರುವ ರಸ್ತೆ ಮಾರ್ಜಿನ್ ಬಿಡತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
7. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (I) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

**ಬಿ. ಎಸ್. ರಾಮಪ್ರಸಾದ್**

ಪಿ.ಆರ್.1170 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

**DEPARTMENT OF CO-OPERATION**
**OFFICE OF THE ASSISTANT REGISTRAR OF CO-OPERATIVE SOCIETIES, I CIRCLE, CHAMARAJPET, BANGALORE-560 018**
**Dated: 5th August 2004**

**Sub :** Confirmation for sale in CEP No. 3112/2002-2003, Decree No. JRB/DIS/85/2002-2003, dated: 20.09.2002, relates to the Sri Lakshmi Narayana Co-Operative Bank Ltd.,

**Ref :** Letter No. SO/CON/EP3112/02-03 31.7.2004 From Sale Officer, attached to Asst. Registrar of Co-Op. Societies Ist Circle, Chamarajapet, Bangalore-18.

**Preamble:**

The Sale Officer, Asst Registrar of Co-Op., Societies Ist Circle, Chamarajapet, Bangalore-18 has conducted the sale in CEP. No. 3112/2002-2003 and Decree No. 85/2002-03 dated: 20.09.2002 at Ramachandrapura Bangalore-21, and sold the under mentioned Immovable Property of Sri H.N. Venugopal due to the loan outstanding to the Sri Lakshmi Narayana Co-Operative Bank Ltd., Ramamohanapura, Bangalore-560 021 and the said Immovable Property knocked down in public auction fixed on 16.06.2004 at Ramachandrapura Bangalore in favour of Sri. T. Murugan, No. 1/3, (264), 2nd Main Raod, 2nd Cross, Ramachandrapura, Bangalore-560 021 for Rs. 14,12,000/- (Rupees Fourteen Lakh Twelve Thousand only). as there are no other highest bidder as per the report of the sale officer. Asst. Registrar of Co-Op., Societies Ist Circle, Chamarajapet, Bangalore-18. Hence the following Orders.

**PROPERTY SCHEDULE**

| Town | Site No. | Extent | Assessment | Kind of Land |
|---|---|---|---|---|
| Kalappa Block, Ramachandra Pura, Ward. 25 Bangalore-21 | No. 1/2, (54) Ist Main Road, Ist Cross, Kalappa Block, ward No. 25 Ramachandra pura, Bangalore-21. | East to West-**15'+12 / 2** North to South 62 Ft. (Constructed House) Ground and First floor constructed house & shop | 41,01,250/- | Ground & Ist Floor Constructed House with one shop |

**ORDERS**

The said Immovable Property of Sri. H. N. Venugopal, No. 1/2, Door No. 54, Ist Main Road, Ist Cross, Kalappa Block, ward No. 25 Ramachandrapura, Bangalore-21, Bangalore, which is mortgaged to the Sri Lakshmi Narayana Co-Operative Bank Ltd., Ramamohanpura, Bangalore-560 021, for having taken loan from the said Bank and default in payment, the property have been sold at Public Auction on 16.06.2004 in CEP No. 3112/2002-03 and Decree No. 85/2002-03 and Knocked down in favour of Sri. T. Murugan, No. 1/3, (264), 2nd Cross, 2nd Main road, Ramachandrapura, Bangalore-560 021, for Rs. 14,12,000/- (Rupees Fourteen Lakh Twelve Thousand only).

Hence the Sale conducted on 16.06.2004 is confirmed in favour of Sri. T. Murugan, No. 1/3, (264), 2nd Cross, 2nd Main road, Ramachandrapura, Bangalore-560 021, who is the highest bidder as per rule 38 of KCS Rules 1960.

Given under my hand as on this day of 5th August 2004

**H. C. JOSHI**
Assistant Registrar of Co-operative Societies,
I Circle, Chamarajpet, Bangalore-560 018.

PR-1171

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ,**
**ಹಾಸನ ಜಿಲ್ಲೆ, ಹಾಸನ**
**ಸಂ.ಕಾಪಕಾ:ಎಫ್:ಎಸ್ಆರ್:24:2004**

**ಅರ್ಜಿದಾರರು :**

1. ಶ್ರೀಮತಿ ಶೈಲಜ ಕೋಂ ಲೇಟ್ ಬಿ. ಬಸವರಾಜು, 23 ವರ್ಷ
2. ಬೇಬಿ ರಾಧಿಕ ಬಿನ್ ಲೇಟ್ ಬಿ. ಬಸವರಾಜು, 3 ವರ್ಷ
3. ಮಾಸ್ಟರ್ ತೀರ್ಥಕುಮಾರ್ ಬಿನ್ ಲೇಟ್ ಬಿ. ಬಸವರಾಜು, ಒಂದೂವರೆ ವರ್ಷ
4. ಬಸಪ್ಪ ಬಿನ್ ಲೇಟ್ ನಿಂಗಪ್ಪ, 61 ವರ್ಷ
   **ವಾಸ:** ಹೊನ್ನಾವರ ಗ್ರಾಮ, ಕಸಬಾ ಹೋಬಳಿ, ಹೊಳೇನರಸೀಪುರ ತಾ:

**ವಿರುದ್ಧ**

**ಪ್ರತಿವಾದಿಗಳು :**

1. ಎಲ್ ಪ್ರವೀಣ್ ಬಿನ್ ಲಿಂಗಯ್ಯ, ಮನೆ ನಂ. 175, ನಾಗೇಂದ್ರ ಬ್ಲಾಕ್, 7ನೇ ಮುಖ್ಯ ರಸ್ತೆ, 3ನೇ ಕ್ರಾಸ್, ಬನಶಂಕರಿ 3ನೇ ಹಂತ, ಬೆಂಗಳೂರು-50

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಬಿ. ಬಸವರಾಜು ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 5.4.2004 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1181

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೋಲಾರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ: ಎಫ್‌ಸಿ:26:2004**

**ಅರ್ಜಿದಾರರು :**

1. ಶ್ರೀಮತಿ ವಿಜಯಲಕ್ಷ್ಮಿ ಕೋಂ ಲೇಟ್ ಶ್ರೀ ರಾಜಣ್ಣ, ಸರ್ಕಾರಿ ಪ್ರೌಢಶಾಲೆ ಆವರಣದ ಹತ್ತಿರ, ಮುತ್ಯಾಲ್‌ಪೇಟೆ, ಮುಳಬಾಗಿಲು.

**ವಿರುದ್ಧ ಪ್ರತಿವಾದಿಗಳು :**

1. ಕಾರ್ಯನಿರ್ವಾಹಕ ಅಭ್ಯಂತರರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಚಾಂಪಿಯನ್ ರೀಫ್ಸ್, ಕೆ.ಜಿ.ಎಫ್-563117.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ವಿಜಯಲಕ್ಷ್ಮಿ ಕೋಂ ಲೇಟ್ ಶ್ರೀ ರಾಜಣ್ಣ ಅವರು ತಮ್ಮ ಗಂಡ: ಶ್ರೀ ರಾಜಣ್ಣ ಅವರು 1ನೇ ಪ್ರತಿವಾದಿ ಕಾರ್ಯನಿರ್ವಾಹಕ ಅಭಿಯಂತರರು, ಬೆಂಗಳೂರು ವಿದ್ಯುತ್ ಸರಬರಾಜು ಕಂ. ನಿ. ರವರ ಬಳಿ ಮೆಕ್ಯಾನಿಕ್ ಗ್ರೇಡ್-II ಆಗಿದ್ದು ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 29.06.2004 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 02.08.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1182

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೋಲಾರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ: ಎಫ್‌ಸಿ:25:2004**

**ಅರ್ಜಿದಾರರು :**

1. ಕೆ. ಲಕ್ಷ್ಮಿ 26 ವರ್ಷ ಕೋಂ ಲೇಟ್ ಮಂಜುನಾಥ್ ಅಲಿಯಾಸ್ ವಿ. ಶ್ರೀನಿವಾಸ್, ನಂ. 1122, 16ನೇ ಮುಖ್ಯ ರಸ್ತೆ, ಶ್ರೀನಗರ, ಬೆಂಗಳೂರು-50.
2. ಹರ್ಷವರ್ಧನ್ ಅಲಿಯಾಸ್ ಹರ್ಷ, 7 ವರ್ಷ ಬಿನ್ ಲೇಟ್ ಮಂಜುನಾಥ್ ಅಲಿಯಾಸ್ ವಿ. ಶ್ರೀನಿವಾಸ್.
3. ಮರಿಯಮ್ಮ 60 ವರ್ಷ ಕೋಂ ವಿ. ವೆಂಕಟೇಶ್
4. ವಿ. ವೆಂಕಟೇಶ್ ನಂ. 1122, 16ನೇ ಮುಖ್ಯ ರಸ್ತೆ, ಶ್ರೀನಗರ, ಬೆಂಗಳೂರು-50.

**ವಿರುದ್ಧ ಪ್ರತಿವಾದಿಗಳು :**

1. ಜಗದೀಶ್ ಆರಾಧ್ಯ ಬಿನ್ ಬಸವಲಿಂಗದೇವರು ಮಂಜುಶ್ರೀ ಟೆಲಿಕಾಂ, ಹೋಟೆಲ್ ಚಾಲುಕ್ಯ ಎದುರು, ರೇಸ್ ಕೋರ್ಸ್ ರಸ್ತೆ, ಬೆಂಗಳೂರು.
2. ಓರಿಯಂಟಲ್ ಇನ್‌ಷೂರೆನ್ಸ್ ಕಂ. ಲಿ., ನಂ. 21, ಸುಬ್ಬಯ್ಯ ಸರ್ಕಲ್, ಮಿಷನ್ ರಸ್ತೆ, ಆಡ್ ಲ್ಯಾಬ್ ಎದುರು, ಬೆಂಗಳೂರು-27.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಕೆ. ಲಕ್ಷ್ಮಿ ಕೋಂ ಲೇಟ್ ಮಂಜುನಾಥ್ ಅಲಿಯಾಸ್ ವಿ. ಶ್ರೀನಿವಾಸ್ ಅವರು ತಮ್ಮ ಗಂಡ ಶ್ರೀ ಮಂಜುನಾಥ್ ಅಲಿಯಾಸ್ ವಿ. ಶ್ರೀನಿವಾಸ್ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಜಗದೀಶ್ ಆರಾಧ್ಯ ಬಿನ್ ಬಸವಲಿಂಗ ದೇವರು ರವರ ಬಳಿ ಚಾಲಕ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 7.7.2004 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ

ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 24.07.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 1183 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ ಜಿಲ್ಲೆ, ಕೋಲಾರ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.**

**ಅಧಿಭಾರ ಅರ್ಜಿ ನಂ. 1:04-05**

**ಅರ್ಜಿದಾರರು :** ವಿರುದ್ಧ **ಎದುರು ಅರ್ಜಿದಾರರು :**

1. ವ್ಯವಸ್ಥಾಪಕರು, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ), ಸಾಲ್ಗಡಿ, ತೀರ್ಥಹಳ್ಳಿ ತಾಲ್ಲೂಕು.

1. ಹೆಚ್. ಎಂ. ಮಂಜಪ್ಪಾಚಾರ್, ಬಿನ್ ಮರಿಯಾಚಾರ್, ಮಾಜಿ ವ್ಯವಸ್ಥಾಪಕರು, ವಿಎಸ್‌ಎಸ್‌ಬಿಎನ್, ಸಾಲ್ಗಡಿ.

**(ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತು ಆಜ್ಞೆ)**

**ಪ್ರಸ್ತಾವನೆ:**

ಅರ್ಜಿದಾರರ ಬ್ಯಾಂಕು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ ಸಂಘದ 2001-02ನೇ ಸಾಲಿನ ಲೆಕ್ಕಪರಿಶೋಧನೆಯ ರೀತ್ಯಾ ರೂ. 66090-00 ಗಳ ದುರುಪಯೋಗದ ವಸೂಲಿ ಬಗ್ಗೆ ಎದುರಿ ಮೇಲೆ ಅಧಿಭಾರ ಅರ್ಜಿಯನ್ನು ದಾಖಲು ಮಾಡಿದ್ದು, ಈ ಸಂಬಂಧವಾಗಿ ದಿನಾಂಕ: 1.6.04 ರಂದು ಅರ್ಜಿದಾರರು ಅರ್ಜಿಯನ್ನು ಮತ್ತು ಎದುರಿಯ ಹೆಸರಿನಲ್ಲಿರುವ ಸ್ಥಿರಾಸ್ತಿಯ ರೆವಿನ್ಯೂ ದಾಖಲೆಗಳನ್ನು ಸಲ್ಲಿಸಿ ವಿವಾದದಲ್ಲಿನ ಮೊಬಲಗು ವಸೂಲಾತಿ ಆಗದೇ ಇರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಅಧಿಭಾರ ಅರ್ಜಿಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂದು ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತು ಕ್ರಮ ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತು ಪೂರ್ವ ಜಪ್ತು ಆಜ್ಞೆಯ ನೋಟೀಸನ್ನು ಹೊರಡಿಸಲಾಗಿದೆ.

**ಕ್ರ. ಸನಿಶಿ 24:ಎಬಿಎನ್:ಕಲಂ 103:04-05 ದಿನಾಂಕ: 22ನೇ ಜುಲೈ 2004**

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್)ಯಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಅಧಿಭಾರ ಅರ್ಜಿಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಎದುರು ಅರ್ಜಿದಾರರು ತಮ್ಮ ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ಈ ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ)ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ಶಿವಮೊಗ್ಗ ಡಿಸಿಸಿ ಬ್ಯಾಂಕ್, ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ರಶೀದಿ ಅಥವಾ ಬ್ಯಾಂಕಿನ ಚಲನ್ನಿನ ಪ್ರತಿಯನ್ನು ದಿನಾಂಕ: 23.08.04ರ ಒಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿನ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

ಷರತ್ತು ಪೂರ್ವಕ ಜಪ್ತು ಆದೇಶಕ್ಕೆ ಒಳಗಾದ "ಅನುಸೂಚಿ"

| ಕ್ರ. ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ:ಸರ್ವೆ | ವಿಸ್ತೀರ್ಣ | ತರಹೆ |
|---|---|---|---|---|---|
| 1) | ಹೆಚ್. ಎಂ. ಮಂಜಪ್ಪಾಚಾರ್, ಬಿನ್ ಮರಿಯಾಚಾರ್ | ತೀರ್ಥಹಳ್ಳಿ ತಾಲ್ಲೂಕು, ಮತ್ತೂರು ಹೋಬಳಿ, ಹೆದ್ದೂರು ಗ್ರಾಮ. | ಸರ್ವೆ ನಂ. 23 | 2.00 ಎ.ಗುಂ. | ತರಿ |

ಈ ಆದೇಶವನ್ನು ಈ ದಿನ ದಿನಾಂಕ: 22.7.2004 ರಂದು ಸ್ವಸಹಿ ಹಾಗೂ ನ್ಯಾಯಾಲಯದ ಮೊಹರಿನೊಂದಿಗೆ ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,

ಪಿ.ಆರ್.1184 ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.**

**ಅಧಿಭಾರ ಅರ್ಜಿ ನಂ. 2:03-04**

**ಅರ್ಜಿದಾರರು :**

1. ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ)., ಸಿಂಗನಮನೆ, ಭದ್ರಾವತಿ ತಾಲ್ಲೂಕು ಇದರ ಪರವಾಗಿ ವ್ಯವಸ್ಥಾಪಕರು.

**ವಿರುದ್ಧ ಎದುರು ಅರ್ಜಿದಾರರು :**

1. ಶ್ರೀ ಎಸ್. ಬಸವರಾಜ್ (ಪೌತಿ), ಮಾಜಿ ವ್ಯವಸ್ಥಾಪಕರು, ವಿಎಸ್‌ಎಸ್‌ಬಿಎನ್, ಸಿಂಗನಮನೆ, ಭದ್ರಾವತಿ ತಾಲ್ಲೂಕು.

**ಪೌತಿ ವಾರಸುದಾರರು:**

1. ಶ್ರೀಮತಿ ಶಾರದಮ್ಮ ಕೋಂ ಲೇಟ್ ಎಸ್. ಬಸವರಾಜ್, ಸಿಂಗನಮನೆ, ಭದ್ರಾವತಿ ತಾಲ್ಲೂಕು.
2. ಕುಮಾರ, ಬಿನ್ ಲೇಟ್ ಎಸ್. ಬಸವರಾಜ್, ಸಿಂಗನಮನೆ, ಭದ್ರಾವತಿ ತಾಲ್ಲೂಕು.

**(ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ಮೇರೆಗೆ ತೀರ್ಪು ಪೂರ್ವ ಜಪ್ತು ಆಜ್ಞೆ)**

**ಪ್ರಸ್ತಾವನೆ:**

ಅರ್ಜಿದಾರರ ಬ್ಯಾಂಕು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ 2000-01 ಮತ್ತು 2001-02ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಂತೆ ರೂ. 1011804-25 ಗಳ ದುರುಪಯೋಗದ ವಸೂಲಿ ಬಗ್ಗೆ ಅಧಿಭಾರ ಅರ್ಜಿಯನ್ನು ದಾಖಲು ಮಾಡಿದ್ದು, ಈ ಸಂಬಂಧವಾಗಿ ದಿನಾಂಕ: 2.6.2004 ರಂದು ಅರ್ಜಿದಾರರು ನೀಡಿದ ಕಲಂ 103ರ ಅರ್ಜಿಯಲ್ಲಿ ಎದುರು ಅರ್ಜಿದಾರರಾದ ಶ್ರೀ ಎಸ್. ಬಸವರಾಜ್ (ಪೌತಿ) ಇವರು ವಾರಸುದಾರರಾದ ತಂದೆ ಶ್ರೀ ನಿಂಗಯ್ಯ, ಬಿನ್ ಸಂದಯ್ಯ, ಕಡೂರಹಳ್ಳಿ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ತೀರ್ಪು ಪೂರ್ವ ಜಪ್ತು ಆದೇಶ ಕೋರಿರುತ್ತಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತು ಪೂರ್ವಕ ಜಪ್ತು ಆಜ್ಞೆಯ ನೋಟೀಸನ್ನು ಹೊರಡಿಸಲಾಗಿದೆ.

**ಆದೇಶ**

**ಸಂ: ಸನಿಶಿ 24: ಎಬಿಎನ್: ಕಲಂ 103:04-05: 761 ದಿನಾಂಕ: 22ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್)ಯಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಅಧಿಭಾರ ಅರ್ಜಿಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಅಲ್ಲದೇ ಎದುರು ಅರ್ಜಿದಾರರುಗಳು ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆಯನ್ನು (ಸೆಕ್ಯೂರಿಟಿಯನ್ನು) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ರಶೀದಿ ಅಥವಾ ಬ್ಯಾಂಕಿನ ಚಲನ್ನಿನ ಪ್ರತಿಯನ್ನು ದಿನಾಂಕ: 23.08.04ರ ಒಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿನ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

ಷರತ್ತು ಪೂರ್ವಕ ಜಪ್ತು ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ (ಷೆಡ್ಯೂಲ್)

| ಕ್ರ. ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ:ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1) | ನಿಂಗಯ್ಯ, ಬಿನ್ ಚಂದಯ್ಯ, ಕಡೂರಹಳ್ಳಿ, ಕಡೂರು ತಾ: ಚಿಕ್ಕಮಗಳೂರು ಜಿಲ್ಲೆ. | ಕಡೂರು ತಾ: ಮತ್ತು ಕಸಬಾ ಕಡೂರಹಳ್ಳಿ ಗ್ರಾಮ | ಸರ್ವೆ ನಂ. 117 ಆರ್.ಆರ್. ನಂ. 973 | 1.5 | ಖುಷ್ಕಿ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ದಿನಾಂಕ: 22.7.2004 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

ಪಿ.ಆರ್.1185

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಬೆಳಗಾಂವ ಜಿಲ್ಲೆ, ಬೆಳಗಾಂವ ಇವರ ನ್ಯಾಯಾಲಯ**

**ನಂ.ಇಎಕ್ಸ್ಇ:ಸಿಆರ್ಎಂ:ಡಿಟಿಸಿಆರ್:615:2002-03**

**ಅಬಕಾರಿ ಗುನ್ನೆ ನಂ. 35/2002-03 ಅಪರಾಧ ದಿನಾಂಕ: 22ನೇ ನವೆಂಬರ್ 2002**

**ಉಪಸ್ಥಿತರು :** ಶ್ರೀ ಎನ್. ಬಿ. ಖೋಜಾ, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಬೆಳಗಾಂವ ಜಿಲ್ಲೆ.

**ಫಿರ್ಯಾದುದಾರರು :** **ವಿರುದ್ಧ** **ಆರೋಪಿತರು :**

1. ರಾಜ್ಯ ಸರಕಾರದ ಪರವಾಗಿ ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಅಥಣಿ ಉಪವಲಯ

1. ಬಾಬು ಮಲ್ಲಪ್ಪಾ ದಾಶ್ಯಾಳ ಸಾ: ಬರಟಗಿ ಜಿಲ್ಲೆ, ಬಿಜಾಪೂರ

**ಅರ್ಜಿದಾರರು :** ಶ್ರೀ ಸಂಜು ಮಾಧವ ಜಾಧವ ಸಾ: ಕಮಲಾಪೂರ ತಾ: ಮಿರಜ ಜಿಲ್ಲೆ ಸಾಂಗಲಿ (ವಾಹನ ಮಾಲೀಕರು)

**ಪ್ರಕರಣದ ಸಂಕ್ಷಿಪ್ತ ಸಾರಾಂಶ**

**ಪ್ರಸ್ತಾವನೆ:**

ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಅಥಣಿ ಉಪವಲಯ ಇವರು ದಿನಾಂಕ: 22.11.2002 ರಂದು ಸಾಯಂಕಾಲ 6.30 ಗಂಟೆ ಸುಮಾರಿಗೆ ಅಥಣಿಯಿಂದ ಮೀರಜಕ್ಕೆ ಹೋಗುವ ರಸ್ತೆಯ ಮೇಲೆ ಒಂದು ಮಹೀಂದ್ರಾ ಜೀಪ್ (ಗ್ರೇ ಕಲರ್) ನಂ. ಎಂ. ಹೆಚ್-10-ಸಿ-1575 ರಲ್ಲಿ 8 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 48x180 ಎಂ.ಎಲ್.ದಂತೆ ಒಟ್ಟು 384 ಮದ್ಯದ ಬಾಟ್ಲಿಗಳನ್ನು ಆರೋಪಿತರು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದಾಗ ಪತ್ತೆ ಹಚ್ಚಿ ಸದರಿ ವಾಹನವನ್ನು ಮದ್ಯ ಸಮೇತ ಜಪ್ತಿಮಾಡಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 13, 14 ಮತ್ತು ಶಿಕ್ಷಾರ್ಹ ಕಲಂ 34, 38 (ಎ)ರ ಪ್ರಕಾರ ಸರಕಾರಕ್ಕೆ ವಶಪಡಿಸಿಕೊಂಡು ಗುನ್ನೆಯನ್ನು ದಾಖಲು ಮಾಡಿಕೊಂಡಿರುತ್ತಾರೆ. ವಾಹನದ ಚಾಲಕನು ಆ ಸಮಯದಲ್ಲಿ ವಾಹನವನ್ನು ಹಿಡಿದಾಗ ಓಡಿಹೋಗಿದ್ದು ವಾಹನದಲ್ಲಿ ಬಾಬು ಮಲ್ಲಪ್ಪಾ ದಾಶ್ಯಾಳ ಎಂಬುವವನು ಇದ್ದು ಆತನನ್ನು ದಸ್ತಗೀರ ಮಾಡಲಾಗಿದೆ. ಅದೇ ಕಾಲದಲ್ಲಿ ರಾಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕವಾಗಿ ಮಾದರಿ ತೆಗೆಯಲಾಗಿದೆ. ಜಪ್ತಾದ ವಾಹನವನ್ನು ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತ ಕ್ರಮ ಕೈಗೊಳ್ಳುವಂತೆ ಫಿರ್ಯಾದಿ ಅಧಿಕೃತ ಅಧಿಕಾರಿಯವರಿಗೆ ವರದಿ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕರಿಗೆ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 (ಬಿ) ಪ್ರಕಾರ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎನ್ನುವ ಬಗ್ಗೆ ಕಾರಣಗಳನ್ನು ನೀಡುವಂತೆ ಕಾರಣ ಕೇಳುವ ನೋಟಿಸನ್ನು ದಿನಾಂಕ: 30.1.2003 ರಂದು ಜಾರಿ ಮಾಡಲಾಗಿದೆ. ವಾಹನದ ಮಾಲೀಕರು ಅದಕ್ಕೆ ತಮ್ಮ ಉತ್ತರವನ್ನು ದಿನಾಂಕ: 6.2.2003 ರಂದು ತಮ್ಮ ವಕೀಲರ ಮುಖಾಂತರ ಸಲ್ಲಿಸಿರುತ್ತಾರೆ.

ಜಪ್ತಾದ ವಾಹನವನ್ನು ತಮ್ಮ ಮಧ್ಯಂತರ ವಶಕ್ಕೆ ಕೊಡಬೇಕೆಂದು ವಾಹನ ಮಾಲೀಕರು ಅರ್ಜಿ ಸಲ್ಲಿಸಿದ್ದು, ಅದಕ್ಕೆ ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಲಿಖಿತ ಆಕ್ಷೇಪಣೆಗಳನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರ ಅರ್ಜಿಯನ್ನು ತಿರಸ್ಕರಿಸಿ ದಿನಾಂಕ: 5.2.2003 ರಂದು ಆದೇಶವನ್ನು ಮಾಡಲಾಗಿತ್ತು. ಸದರಿ ಆದೇಶದ ವಿರುದ್ಧ ಅರ್ಜಿದಾರರು ಮಾನ್ಯ 1ನೇ ಅಧಿಕ ಜಿಲ್ಲಾ ಹಾಗೂ ಸತ್ರ ನ್ಯಾಯಾಲಯ, ಬೆಳಗಾಂವಿಯಲ್ಲಿ ಮೇಲ್ಮನವಿ ನಂ. 19/2003 ನೇದ್ದನ್ನು ಸಲ್ಲಿಸಿದ್ದಾರೆ. ಮಾನ್ಯ ನ್ಯಾಯಾಲಯದ ಆದೇಶದ ದಿನಾಂಕ: 5.4.2003 ರಲ್ಲಿ ನೀಡಿದ ನಿರ್ದೇಶನದಂತೆ ಸದರಿ ವಾಹನವನ್ನು ಅರ್ಜಿದಾರರ ಮಧ್ಯಂತರ ವಶಕ್ಕೆ ಕೊಡಲಾಗಿದೆ. ಈ ಬಗ್ಗೆ ಅರ್ಜಿದಾರರಿಂದ ಬ್ಯಾಂಕ್ ಗ್ಯಾರಂಟಿ ಹಾಗೂ ನಷ್ಟ ಭರ್ತಿ ಪತ್ರವನ್ನು ಪಡೆದುಕೊಳ್ಳಲಾಗಿದೆ.

ಪ್ರಕರಣದ ವಿಚಾರಣೆಯನ್ನು ಕೈಗೆತ್ತಿಕೊಂಡು ಸರ್ಕಾರದ ಪರವಾಗಿ ಇಬ್ಬರು ಪಂಚರು ಹಾಗೂ ಫಿರ್ಯಾದಿ ವ ತನಿಖಾಧಿಕಾರಿ ಇವರ ಹೇಳಿಕೆಗಳನ್ನು ಪಡೆದುಕೊಳ್ಳಲಾಗಿದೆ. ನಿಶಾನೆ ಪಿ-1 ರಿಂದ 5ರ ವರೆಗೆ ದಾಖಲೆಗಳನ್ನು ಗುರುತಿಸಲಾಗಿದೆ. ಜಪ್ತಾದ ವಾಹನವನ್ನು ಮುದ್ದೆಮಾಲು 1 ಅಂತಾ ಗುರುತಿಸಲಾಗಿದೆ. ವಾಹನದ ಮಾಲೀಕರ ಪರವಾಗಿ ಅದರ ನೋಂದಾಯಿತ ಮಾಲೀಕರು ತಮ್ಮ ಹೇಳಿಕೆಯನ್ನು ನೀಡಿದ್ದು, ವಾಹನದ ನೋಂದಣಿ ಪುಸ್ತಕ ಹಾಗೂ ಚಾಲಕನ ಲೈಸೆನ್ಸ್‌ನ್ನು ನಿಶಾನೆ ಡಿ-1 ಮತ್ತು 2 ಅಂತಾ ಗುರುತಿಸಲಾಗಿದೆ. ಉಭಯ ಪಕ್ಷಗಳ ವಾದವನ್ನು ಕೇಳಲಾಗಿದೆ.

ಪ್ರಕರಣದಲ್ಲಿಯ ಸಾಕ್ಷಿದಾರರುಗಳ ಆಧಾರದಿಂದ ಈ ಕೆಳಗಿನ ಮುದ್ದೆಗಳನ್ನು ತಯಾರಿಸಿ ತೀರ್ಮಾನಿಸಲಾಗಿದೆ.

1. ದಿನಾಂಕ: 22.11.2002 ರಂದು ಜಪ್ತಾದ ವಾಹನ ನಂ. ಎಂಎಚ್-10-ಸಿ-1575 ನೇದ್ದರಲ್ಲಿ ಜಪ್ತಾದ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡಲಾಗಿತ್ತೇ?
2. ಮೇಲ್ಕಂಡ ಅಪರಾಧವನ್ನು ತಮ್ಮ ಒಪ್ಪಿಗೆ ಇಲ್ಲದೇ ಮತ್ತು ತಮ್ಮ ತಿಳುವಳಿಕೆಗೆ ಬರದಂತೆ ಮಾಡಲಾಗಿದೆ ಎಂದು ಪ್ರಾಧಿಕಾರಕ್ಕೆ ಮನವರಿಕೆ ಮಾಡಿಕೊಡಲು ವಾಹನದ ಮಾಲೀಕರು ಸಫಲರಾಗಿದ್ದಾರೆಯೇ?
3. ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಕೆಳಗೆ ವಿವರಿಸಿದ ಕಾರಣಗಳಿಗಾಗಿ ಮೇಲ್ಕಂಡ ಮುದ್ದೆಗಳನ್ನು ಈ ಕೆಳಗಿನಂತೆ ತೀರ್ಮಾನಿಸಲಾಗಿದೆ.

1. ಹೌದು
2. ಇಲ್ಲ
3. ಹೌದು

ಈ ಪ್ರಕರಣದಲ್ಲಿ ವಿಚಾರಣೆಯಾಗಿ ಪಂಚರಿಬ್ಬರು ಪ್ರತಿಕೂಲ ಸಾಕ್ಷಿಯನ್ನು ನೀಡಿದ್ದಾರೆ. ಆದರೆ ಪಂಚನಾಮೆ ನಿಶಾನೆ ಪಿ-1 ರಲ್ಲಿ ತಮ್ಮ ಸಹಿ ಮಾಡಿರುವುದಾಗಿ ಒಪ್ಪಿಕೊಂಡಿದ್ದಾರೆ. ಪ್ರಕರಣದ ಪಿರ್ಯಾದಿ ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಅಥಣಿ ಉಪ ವಲಯ ಇವರು

ಘಟನೆಯ ದಿನ ತಾನು ತನ್ನ ಸಿಬ್ಬಂದಿಯೊಂದಿಗೆ ಜಪ್ತಾದ ವಾಹನವನ್ನು ನಿಲ್ಲಿಸಿ ಪರಿಶೀಲಿಸಿದ ಬಗ್ಗೆ ಮತ್ತು ಅದರಲ್ಲಿ ಇಲಾಖೆಯ ಅನುಮತಿ ಇಲ್ಲದೇ ಜಪ್ತಾದ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದಾಗ ಪತ್ತೆ ಹಚ್ಚಿ ಪಂಚರ ಸಮಕ್ಷಮ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿರುವುದಾಗಿ ಹೇಳಿರುತ್ತಾರೆ. ಈ ಬಗ್ಗೆ ನಿಶಾನೆ ಪಿ-1 ರಂತೆ ಪಂಚನಾಮೆಯನ್ನು, ನಿಶಾನೆ ಪಿ-2 ರಂತೆ ಫಿರ್ಯಾದನ್ನು, ನಿಶಾನೆ ಪಿ-3 ರಂತೆ ಪ್ರಥಮ ವರ್ತಮಾನ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುವುದಾಗಿ ಹೇಳಿದ್ದಾರೆ. ಜಪ್ತಾದ ಮದ್ಯವನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ ನಿಶಾನೆ ಪಿ-4 ರಂತೆ ಪ್ರಮಾಣ ಪತ್ರವನ್ನು ಪಡೆದುಕೊಂಡಿದ್ದು, ಅಬಕಾರಿ ಅಧೀಕ್ಷಕರವರಿಗೆ ನಿಶಾನೆ ಪಿ-5 ರಂತೆ ವರದಿ ಸಲ್ಲಿಸಿದ ಬಗ್ಗೆ ಹೇಳಿದ್ದಾರೆ. ತನಿಖೆ ಮುಗಿಸಿ ಆರೋಪಿತರ ವಿರುದ್ಧ ಆರೋಪಣಾ ಪತ್ರವನ್ನು ನ್ಯಾಯಾಲಯದಲ್ಲಿ ಸಲ್ಲಿಸಿದ ಬಗ್ಗೆ ಹೇಳಿದ್ದಾರೆ. ಸದರಿಯವರನ್ನು ವಾಹನದ ಮಾಲೀಕರ ಪರವಾಗಿ ಪಾಟಿ ಸವಾಲು ಮಾಡಲಾಗಿದೆ.

ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿದ್ದು, ಅವರನ್ನು ಸರ್ಕಾರದ ಪರವಾಗಿ ಪಾಟಿ ಸವಾಲು ಮಾಡಲಾಗಿದೆ. ವಾಹನದ ಮಾಲೀಕರು ವಾಹನವನ್ನು ತನ್ನ ಒಪ್ಪಿಗೆ ಇಲ್ಲದೇ ಅಕ್ರಮವಾಗಿ ಮದ್ಯ ಸಾಗಾಟಕ್ಕೆ ಉಪಯೋಗ ಮಾಡಿದ್ದಾರೆಂದು ಪ್ರಾಧಿಕಾರಕ್ಕೆ ಮನವರಿಕೆ ಮಾಡಿಕೊಡುವಲ್ಲಿ ವಿಫಲರಾಗಿದ್ದಾರೆ. ತಮ್ಮ ವಾಹನ ದುರ್ಬಳಕೆಯಾಗದಂತೆ ಯಾವುದೇ ಮುಂಜಾಗರೂಕತಾ ಕ್ರಮಗಳನ್ನು ಕೈಗೊಂಡಿದ್ದು ಕಂಡುಬರುವುದಿಲ್ಲ. ತನ್ನ ವಾಹನವನ್ನು ತಾನೇ ಚಲಾಯಿಸುತ್ತಿದ್ದ ಬಗ್ಗೆ ಒಪ್ಪಿಕೊಂಡಿದ್ದಾರೆ. ತನ್ನ ವಾಹನವನ್ನು ತಾನು ಮನೆಯಲ್ಲಿ ಇಲ್ಲದಿದ್ದಾಗ ಯಾರೋ ತೆಗೆದುಕೊಂಡು ಹೋಗಿರುತ್ತಾರೆಂದು ಹೇಳಿದ್ದಾರೆ. ಆದರೆ ಈ ಬಗ್ಗೆ ಪೊಲೀಸರಿಗೆ ಫಿರ್ಯಾದು ಕೊಟ್ಟ ಬಗ್ಗೆ ಯಾವುದೇ ಪುರಾವೆ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುವುದಿಲ್ಲ. ಈ ಕಾರಣಗಳಿಗಾಗಿ ಮತ್ತು ದಾಖಲೆಗಳ ಆಧಾರದಿಂದ ಜಪ್ತಾದ ವಾಹನವನ್ನು ಹಾಗೂ ಜಪ್ತಾದ ಮದ್ಯವನ್ನು ವಾಹನದ ಮಾಲೀಕರ ಒಪ್ಪಿಗೆಯಿಂದಲೇ ಅವರ ಲಾಭಕ್ಕಾಗಿ ಸಾಗಾಟ ಮಾಡಲಾಗಿದೆ ಎಂದು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

ನಾನು ಎನ್. ಬಿ. ಖೋಜಾ, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಬೆಳಗಾಂವ ಜಿಲ್ಲೆ ಕರ್ನಾಟಕ ಅಬಕಾರಿ ಕಾಯ್ದೆ 1965ರ 43(ಎ) ನಿಯಮದ ಪ್ರಕಾರ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಈ ಪ್ರಕರಣದಲ್ಲಿ ಜಪ್ತಾಗಿರುವ ವಾಹನ ಸಂಖ್ಯೆ: ಎಂಎಚ್-10-ಸಿ-1575 (ಮಹೀಂದ್ರಾ ಜೀಪ್) ನೇದ್ದನ್ನು ಕರ್ನಾಟಕ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದೇನೆ.

ಈ ಮೊದಲು ಸದರಿ ವಾಹನವನ್ನು ವಾಹನದ ಮಾಲೀಕರ ಮಧ್ಯಂತರ ವಶಕ್ಕೆ ನೀಡಿದ ಬಗ್ಗೆ ಆದೇಶವನ್ನು ರದ್ದುಗೊಳಿಸಲಾಗಿದೆ.

ಈ ಆದೇಶವನ್ನು ದಿನಾಂಕ: 28.7.2004 ರಂದು ಬೆರಳಚ್ಚು ಮಾಡಿಸಿ, ಪ್ರತಿಯನ್ನು ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

**ಎನ್. ಬಿ. ಖೋಜಾ**

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಬೆಳಗಾಂವ ಜಿಲ್ಲೆ.

**ಅನುಬಂಧ**

**ಸರ್ಕಾರದ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

1) ಜಯಸಿಂಗ ಅಣ್ಣಾರಾವ ಪವಾರ ದೇಸಾಯಿ - ಪಂಚ
2) ವಿಲಾಸ ಅಪ್ಪಾಸಾಹೇಬ ಪಾಟೀಲ - ಪಂಚ
3) ವಿಠ್ಠಲ ಶಿವಲಿಂಗ ಹರಿಜನ - ಫಿರ್ಯಾದಿ ಮತ್ತು ತನಿಖಾಧಿಕಾರಿ

**ಸರ್ಕಾರದ ಪರವಾಗಿ ಗುರುತಿಸಲಾದ ದಾಖಲೆಗಳು:**

1) ನಿಶಾನೆ ಪಿ-1 - ಪಂಚನಾಮೆ
2) ನಿಶಾನೆ ಪಿ-1 ಎ.ಬಿ.ಸಿ. - ಸಾಕ್ಷಿದಾರರ ಸಹಿಗಳು
3) ನಿಶಾನೆ ಪಿ-2 - ಫಿರ್ಯಾದು
4) ನಿಶಾನೆ ಪಿ-3 - ಪ್ರಥಮ ವರ್ತಮಾನ ವರದಿಯ ಪ್ರತಿ
5) ನಿಶಾನೆ ಪಿ-4 - ರಾಸಾಯನಿಕ ಪರೀಕ್ಷೆಯ ವರದಿ
6) ನಿಶಾನೆ ಪಿ-5 - ಅಧಿಕೃತ ಅಧಿಕಾರಿಯವರಿಗೆ ಸಲ್ಲಿಸಿದ ವರದಿ.
7) ನಿಶಾನೆ ಪಿ-5 ಎ - ಫಿರ್ಯಾದಿಯ ಸಹಿ

**ಸರ್ಕಾರದ ಪರವಾಗಿ ಗುರುತಿಸಲಾದ ಮುದ್ದೆಮಾಲು:**

1) ಎಂ. ಓ ಜಪ್ತಾದ ವಾಹನ ನಂ. ಎಂಎಚ್-10-ಸಿ-1575 (ಮಹೀಂದ್ರಾ ಜೀಪ್)

**ವಾಹನದ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

1) ಸಂಜು ಮಹಾದೇವ ಜಾಧವ - ವಾಹನದ ಮಾಲೀಕರು

**ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

1) ನಿಶಾನೆ ಡಿ-1 - ಆರ್. ಸಿ. ಪುಸ್ತಕ
2) ನಿಶಾನೆ ಡಿ-2 - ಡ್ರೈವರ್ ಲೈಸನ್ಸ್.

**ಎನ್. ಬಿ. ಖೋಜಾ**

ಪಿ.ಆರ್.1186 ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಬೆಳಗಾಂವ ಜಿಲ್ಲೆ.

## ಜಿಲ್ಲಾಧಿಕಾರಿಯವರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ

### ಅಧಿಸೂಚನೆ

**ನಂ: ಡಿ.ಡಿಸ್: ಆರ್‌ಟಿಎ: ಸಿಆರ್:34/2004-05 ದಿನಾಂಕ: 5ನೇ ಆಗಸ್ಟ್ 2004**

ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ವಿಭಾಗ ಉಡುಪಿ ರವರು ತಮ್ಮ ಪತ್ರ ನಂ: ಲೋ.ಇ. ಉ.ವಿ. ಸೇತುವೆ/ ಇತರೆ 2004-05 ಜೆ. ಇ./2108 ದಿನಾಂಕ: 3.8.2004ರ ಪತ್ರದಲ್ಲಿ ಉಡುಪಿ ಜಿಲ್ಲೆಯಲ್ಲಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ರಾಜ್ಯ ಹೆದ್ದಾರಿ, ಇತರ ಜಿಲ್ಲಾ ಮುಖ್ಯ ರಸ್ತೆಗಳಲ್ಲಿ ನಿಗದಿಪಡಿಸಲಾದ ಭಾರಕ್ಕಿಂತ ಹೆಚ್ಚಿನ ಭಾರವನ್ನು ಹೊತ್ತು ಸಾಗುವ ಫೆರೋ ಮ್ಯಾಂಗನೀಸ್ ಅದಿರು ತುಂಬಿದ ಲಾರಿಗಳಿಂದ ರಸ್ತೆ ಹಾಗೂ ಸೇತುವೆಗಳು ಹಾನಿಗೊಂಡಿರುವುದನ್ನು ಗಮನಿಸಲಾಗಿದ್ದು, ದಿನಾಂಕ: 29.07.2004 ರಂದು ಬ್ರಹ್ಮಾವರ-ಜನ್ನಾಡಿ ರಸ್ತೆಯ ಕಿ.ಮೀ. 2-20 ರಲ್ಲಿ ನಿರ್ಮಿಸಲಾದ ಸೇತುವೆ ಸುಮಾರು 40 ಟನ್ ಬಾರದ ಫೆರೋ ಮ್ಯಾಂಗನೀಸ್ ಅದಿರು ತುಂಬಿದ ಲಾರಿಗಳು ಹಾದು ಹೋದ್ದರಿಂದ ಸೇತುವೆಯ ಛಾವಣಿಯು ಕುಸಿದು ಸಂಚಾರಕ್ಕೆ ತೊಂದರೆಯಾಗಿರುತ್ತದೆ.

ಸಾಮಾನ್ಯವಾಗಿ ಈ ರಸ್ತೆ ಮತ್ತು ಮೋರಿಗಳು ಹತ್ತು ಟನ್ ಹಾಗೂ ಸೇತುವೆ 20 ಟನ್ ಭಾರ ಹೊರುವ ಸಾಮರ್ಥ್ಯವನ್ನು ಮಾತ್ರ ಹೊಂದಿದ್ದು, ಮ್ಯಾಂಗನೀಸ್ ಅದಿರು ತುಂಬಿದ ಲಾರಿಗಳು ಸುಮಾರು 40 ಟನ್‌ಗೂ ಅಧಿಕ ಭಾರವಿರುವುದರಿಂದ ರಸ್ತೆಗಳು, ಸೇತುವೆಗಳು ಹಾನಿಗೊಳ್ಳುವ ಸಂಭವವಿರುವುದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ ಈ ಕೆಳಗಿನ ರಸ್ತೆಗಳಲ್ಲಿ ಮುಂಜಾಗ್ರತಾ ಕ್ರಮವಾಗಿ ಫೆರೋ ಮ್ಯಾಂಗನೀಸ್ ಅದಿರು ತುಂಬಿದ ಲಾರಿಗಳ ಸಂಚಾರವನ್ನು ನಿಷೇಧಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಉಡುಪಿ ವಿಭಾಗ ರವರ ಪತ್ರದಲ್ಲಿನ ತಾಂತ್ರಿಕ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ. ಮಲೆನಾಡಿನಲ್ಲಿ ರಸ್ತೆ ಸಂಪರ್ಕ ಅತೀ ಮುಖ್ಯವಾಗಿದ್ದು, ಸಂಪರ್ಕ ಕಡಿದು ಹೋದಲ್ಲಿ ಅದರಿಂದ ಉಂಟಾಗುವ ಪರಿಣಾಮಗಳು ಅನೇಕ ರೀತಿಯದ್ದಾಗಿದೆ. ಮಳೆಗಾಲದಲ್ಲಿ ಈ ಅಪಾಯಗಳು ಇನ್ನೂ ಹೆಚ್ಚಾಗುವ ಸಂಭವವಿದ್ದು, ಸದ್ರಿ ರಸ್ತೆಗಳು, ಸೇತುವೆಗಳು ಬಹಳ ಹಿಂದೆ ಸೀಮಿತ ಭಾರವನ್ನು ಹೊರುವ ಉದ್ದೇಶದಿಂದ ನಿರ್ಮಾಣಗೊಂಡಿದ್ದು, ಸಾಮಾನ್ಯವಾಗಿ ರಸ್ತೆ ಮತ್ತು ಮೋರಿಗಳು 10 ಟನ್ ಹಾಗೂ ಸೇತುವೆ 20 ಟನ್ ಭಾರ ಹೊರುವ ಸಾಮರ್ಥ್ಯವನ್ನು ಹೊಂದಿರುವುದರಿಂದ ಈ ರಸ್ತೆಗಳನ್ನು ಸಂರಕ್ಷಿಸುವುದು ಅತೀ ಅವಶ್ಯಕತೆಯಿದೆ. ಈ ಬಗ್ಗೆ ಜಿಲ್ಲೆಯಾದ್ಯಂತ ತೀವ್ರ ರೀತಿಯ ಪ್ರತಿಭಟನೆಗಳು ಜರುಗುತ್ತಿದ್ದು, ಜಿಲ್ಲೆಯಲ್ಲಿ ಕಾನೂನು ಸುವ್ಯವಸ್ಥೆಗೆ ಭಂಗ ತರುವ ಪರಿಸ್ಥಿತಿಯುಂಟಾಗಿರುವುದನ್ನು ಮನಗಾಣಲಾಗಿದೆ.

### ಆದೇಶ

ಈ ಮೇಲಿನ ಎಲ್ಲಾ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಸಾರ್ವಜನಿಕ ಹಿತದೃಷ್ಟಿಯಿಂದ ಎಸ್.ಆರ್. ಉಮಾಶಂಕರ್ ಭಾ.ಆ.ಸೇ. ಜಿಲ್ಲಾ ದಂಡಾಧಿಕಾರಿ, ಉಡುಪಿಜಿಲ್ಲೆ ಆದ ನಾನು ಮೋಟಾರು ವಾಹನ ಕಾಯ್ದೆ 1988ರ ಕಲಂ 115 ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಲೋಕೋಪಯೋಗಿ ಇಲಾಖೆಯ ಶಿಫಾರಸ್ಸಿನಂತೆ ಈ ಕೆಳಗಿನ ರಸ್ತೆಗಳಲ್ಲಿ ಫೆರೋ ಮ್ಯಾಂಗನೀಸ್ ಅದಿರು ತುಂಬಿದ ಲಾರಿಗಳ ಸಂಚಾರವನ್ನು ಈ ಅಧಿಸೂಚನೆಯ ದಿನಾಂಕದಿಂದ ಸಂಪೂರ್ಣವಾಗಿ ನಿಷೇಧಿಸಿ ಅಧಿಸೂಚನೆ ಹೊರಡಿಸಿರುತ್ತೇನೆ.

**ಸಂಚಾರ ನಿಷೇಧಿಸಿದ ಜಿಲ್ಲಾ ಮುಖ್ಯ ರಸ್ತೆಗಳು**

| | | |
|---|---|---|
| 1) | ಕೋಟ-ಗೋಳಿಯಂಗಡಿ ರಸ್ತೆ | ಕಿ.ಮೀ. 0.00 ರಿಂದ 26.60 |
| 2) | ಸೀತಾನದಿ-ಬ್ರಹ್ಮಾವರ ರಸ್ತೆ | ಕಿ.ಮೀ. 10.50 ರಿಂದ 35.00 |
| 3) | ಬ್ರಹ್ಮಾವರ-ಜನ್ನಾಡಿ ರಸ್ತೆ | ಕಿ.ಮೀ. 0.00 ರಿಂದ 19.40 |
| 4) | ಬಾರ್ಕೂರು-ಹೆಬ್ಬಾಡಿ ರಸ್ತೆ | ಕಿ.ಮೀ. 0.00 ರಿಂದ 11.20 |
| 5) | ಸೋಮೇಶ್ವರ-ಕೋಟೇಶ್ವರ ರಸ್ತೆ | ಕಿ.ಮೀ. 27.60 ರಿಂದ 33.00 |
| 6) | ಸೌಧ-ಸಿದ್ದಾಪುರ ರಸ್ತೆ | ಕಿ.ಮೀ. 2.40 ರಿಂದ 11.90 |

**ರಾಜ್ಯ ಹೆದ್ದಾರಿಗಳು**

| | | |
|---|---|---|
| 7) | ತೀರ್ಥಹಳ್ಳಿ-ಕುಂದಾಪುರ ರಸ್ತೆ | ಕಿ.ಮೀ. 42- ರಿಂದ 84.00 |
| 8) | ವಿರಾಜಪೇಟೆ-ಬೈಂದೂರು ರಸ್ತೆ | ಕಿ.ಮೀ. 313.90 ರಿಂದ 317.90 |

ಈ ಅಧಿಸೂಚನೆಯು ದಿನಾಂಕ: 05.08.2004 ರಿಂದ ಮುಂದಿನ ಆದೇಶ ಹೊರಡಿಸುವವರೆಗೆ ಜಾರಿಯಲ್ಲಿರುತ್ತದೆ.

ಈ ಅಧಿಸೂಚನೆಯನ್ನು ನನ್ನ ಸ್ವಹಸ್ತ ಸಹಿ ಹಾಗೂ ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

ಪಿ.ಆರ್.1187 ಜಿಲ್ಲಾ ದಂಡಾಧಿಕಾರಿ ಹಾಗೂ ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ.

## ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ

### ಪತ್ರಿಕಾ ಪ್ರಕಟಣೆ

**ಸಂ: ಬಿಸಿಎಂ: ಅಕಾಪತ: ಸಿಆರ್ 14:04-05 ದಿನಾಂಕ: 3ನೇ ಆಗಸ್ಟ್ 2004**

**ವಿಷಯ :** 2004-05ನೇ ಸಾಲಿಗೆ ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಂದ ತರಬೇತಿಗಾಗಿ ಅರ್ಜಿಯನ್ನು ಆಹ್ವಾನಿಸುವ ಬಗ್ಗೆ.

**ವಿಷಯ :** 1. ಈ ಕಛೇರಿಯ ಸಮಸಂಖ್ಯೆ ಪತ್ರಿಕಾ ಪ್ರಕಟಣೆ ದಿನಾಂಕ: 22.6.04

ಶಿವಮೊಗ್ಗ ಜಿಲ್ಲೆಯ ವ್ಯಾಪ್ತಿಗೆ ಬರುವ ಅಲ್ಪಸಂಖ್ಯಾತರ ವರ್ಗಗಳಿಗೆ ಸೇರಿದ ಕಾನೂನು ಪದವೀಧರರಿಗೆ 2004-05ನೇ ಸಾಲಿನಲ್ಲಿ ಇಲಾಖಾ ವತಿಯಿಂದ ತರಬೇತಿ ಪಡೆಯುವ ಸಲುವಾಗಿ ತರಬೇತಿ ಆಯ್ಕೆಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಸ್ವೀಕರಿಸಲು ದಿನಾಂಕ: 31.07.2004 ಕೊನೆಯ ದಿನಾಂಕವೆಂದು ಗೊತ್ತುಪಡಿಸಿ ಪ್ರಕಟಣೆ ನೀಡಲಾಗಿತ್ತು.

ಅರ್ಜಿ ಸ್ವೀಕರಿಸುವ ಕಡೆಯ ದಿನಾಂಕವನ್ನು 31.7.2004 ರಿಂದ 25.8.2004 ರವರೆಗೆ ವಿಸ್ತರಿಸಲಾಗಿದೆ. ಉಳಿದಂತೆ ನಿಬಂಧನೆಗಳು ಜಾರಿಯಲ್ಲಿರುತ್ತದೆ. ಹೆಚ್ಚಿನ ವಿವರಗಳಿಗೆ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ ಇವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸುವುದು.

ಜಿಲ್ಲಾ ಅಧಿಕಾರಿಗಳು,

ಪಿ.ಆರ್.1188 ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ :** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹುಲಗೇರಿ ಗ್ರಾಮದಲ್ಲಿ ಶ್ರೀ ಫಕೀರ್ ಸಾಬ್ ರಾಜೂರು ರವರಿಗೆ ಪಿಂಕ್ ಗ್ರಾನೈಟ್‌ಗಾಗಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 167ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ವಿಷಯ :** 1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:167:2003-04:166 ದಿನಾಂಕ: 12.4.2004.

2. ಹಿರಿಯ ಭೂವಿಜ್ಞಾನಿ:ಗಭೂಇ: ಕೊಖವಿ:ಕಗಗು-167: 2004-05 ದಿನಾಂಕ: 29.6.2004.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹುಲಗೇರಿ ಗ್ರಾಮದ ಸರ್ವೆ ನಂ. 48:8:398 ರಲ್ಲಿ ಶ್ರೀ ಫಕೀರ್ ಸಾಬು ರಾಜೂರು ರವರಿಗೆ 3-00 ಎಕರೆಗೆ ದಿನಾಂಕ: 7.3.98 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2)ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 94251-00 ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

### ಆದೇಶ

### ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು: 167:2004-05: 5978 ದಿನಾಂಕ: 9ನೇ ಆಗಸ್ಟ್ 2004

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ, ಹುಲಗೇರಿ ಗ್ರಾಮದ ಸರ್ವೆ ನಂ. 48:8:398 ರಲ್ಲಿ 3-00 ಎಕರೆಗೆ ಪಿಂಕ್ ಗ್ರಾನೈಟ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 167ನ್ನು ತಕ್ಷಣದಿಂದ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್.1189 ನಿರ್ದೇಶಕರು,

ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

## ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರ ನಡವಳಿಗಳು

**ಉಪಸ್ಥಿತರು :** ರೇಮಂಡ್ ಡಿ. ಅಲ್ಮೇಡ ನೋಂದಣಿ ಪ್ರಾಧಿಕಾರಿ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ.

**ವಿಷಯ :** ಮೋಟಾರು ವಾಹನ ಸಂಖ್ಯೆ: ಕೆಎ-14 ಎಂ 327 ನೋಂದಣಿ ಮತ್ತು ನೋಂದಣಿ ಪತ್ರವನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ :** 1. ವಾಹನ ಮಾಲೀಕರ ಅರ್ಜಿ ದಿನಾಂಕ: 29.6.04

2. ವಾಹನ ನಿರೀಕ್ಷಕರ ವರದಿ ದಿನಾಂಕ: 06.07.04

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಹಾಗೂ ಉಲ್ಲೇಖದಂತೆ ವಾಹನ ಸಂಖ್ಯೆ: ಕೆಎ-14 ಎಂ 327 ಮಾಲೀಕರಾದ ಶ್ರೀ ಎಸ್. ಎ. ಭಕ್ಷಿ, ಬಿನ್. ಸೈಯದ್ ಇಕ್ಬಾಲ್, ರೆಹಮಾನ್‌ಮಂಜಿಲ್, ಕೆ.ಆರ್.ಪುರಂ ರಸ್ತೆ, ಶಿವಮೊಗ್ಗ ಇವರು ದಿನಾಂಕ: 29.6.04 ರಂದು ವಾಹನ ನೋಂದಣಿ ರದ್ದುಪಡಿಸಲು ಮನವಿ ಮಾಡಿದ್ದಾರೆ. ಹಾಗೂ ಅವಧಿ 31.7.04 ರವರೆಗೆ ತೆರಿಗೆಯನ್ನು ಪಾವತಿಸಿದ್ದು ಮತ್ತು ವಾಹನ ನಿರೀಕ್ಷಕರು ದಿನಾಂಕ: 6.7.04 ರಂದು ವಾಹನದ ಸ್ಥಿತಿಗತಿಯ ಬಗ್ಗೆ ವರದಿಯನ್ನು ಸಲ್ಲಿಸಿ, ವಾಹನದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ.

ಆದುದರಿಂದ ಈ ಮೇಲೆ ವಿವರಿಸಿರುವ ಅಂಶವನ್ನು ಪರಿಶೀಲಿಸಿ, ಸದರಿ ವಾಹನದ ಮುಟ್ಟುಗೋಲನ್ನು ರದ್ದುಪಡಿಸುವ ಸಲುವಾಗಿ ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

### ಆದೇಶ

### ಸಂ:ಪ್ರಾಸಾಅ:ಶಿ:ಎಸ್‌ಆರ್:ಕೆಎ-14:ಎಂ:327:4-5 ದಿನಾಂಕ: 8ನೇ ಜುಲೈ 2004

ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಆದ ನಾನು ನನಗೆ ಪ್ರದತ್ತವಾದ ಅಧಿಕಾರದ ಮೇರೆಗೆ ಮೋಟಾರು ವಾಹನ ಸಂಖ್ಯೆ: ಕೆಎ-14:ಎಂ:327 ವಾಹನದ ಮೇಲೆ ಏನಾದರೂ ತೆರಿಗೆ ಬಾಕಿ ತನಿಖಾ ಆಕ್ಷೇಪಣೆಗಳು

ಇರುವುದು ಕಂಡುಬಂದಲ್ಲಿ ಸದರಿ ವಾಹನದ ಮಾಲೀಕರೆ ಪಾವತಿಸಬೇಕೆಂದು ಷರತ್ತಿನೊಂದಿಗೆ ನೋಂದಣಿಯನ್ನು ಮೋಟಾರು ವಾಹನ ಕಾಯ್ದೆ 1988ರ ವಿಧಿ 55(2) ರ ಪ್ರಕಾರ ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | | |
|---|---|---|---|
| 1) | ವಾಹನದ ಸಂಖ್ಯೆ | : | ಕೆಎ-14:ಎಂ 327 |
| 2) | ನೋಂದಣಿ ದಿನಾಂಕ | : | 16-11-1991 (ಕಾನ್‌ಫಿಸ್‌ಕೇಟೆಡ್) |
| 3) | ವಾಹನದ ವರ್ಗ | : | ಲಕ್ಸುರಿ ಟ್ಯಾಕ್ಸಿ, |
| 4) | ತಯಾರಕರ ಹೆಸರು | : | ಹಿಂದೂಸ್ಥಾನ್ ಮೋಟಾರ್ ಲಿ. |
| 5) | ಅಡಿಗಚ್ಚು ಸಂಖ್ಯೆ | : | 1119670 |
| 6) | ಯಂತ್ರದ ಸಂಖ್ಯೆ | : | 941122 |
| 7) | ಮಾಲೀಕರು | : | ಶ್ರೀ ಎಸ್. ಎ. ಬಕ್ಷಿ, ಬಿನ್ ಸೈಯದ್ ಇಕ್ಬಾಲ್, ರೆಹಮಾನ್‌ಮಂಜಿಲ್ ಕೆ. ಆರ್. ಪುರಂರಸ್ತೆ, ಶಿವಮೊಗ್ಗ. |

ಪಿ.ಆರ್.1190 ಸಹಕಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ.

**ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರ ನಡವಳಿಗಳು**

**ಉಪಸ್ಥಿತರು :** ರೇಮಂಡ್ ಡಿ. ಅಲ್ಮೇಡ ನೋಂದಣಿ ಪ್ರಾಧಿಕಾರಿ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ.

**ವಿಷಯ :** ಮೋಟಾರು ವಾಹನ ಸಂಖ್ಯೆ: ಸಿಎಬಿ-8029-8030 ಪಿಟಿಟಿ ನೋಂದಣಿ ಮತ್ತು ನೋಂದಣಿ ಪತ್ರವನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ :** 1. ವಾಹನ ಮಾಲೀಕರ ಅರ್ಜಿ ದಿನಾಂಕ: 14.6.04
2. ವಾಹನ ನಿರೀಕ್ಷಕರ ವರದಿ ದಿನಾಂಕ: 22.05.04

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಹಾಗೂ ಉಲ್ಲೇಖದಂತೆ ವಾಹನ ಸಂಖ್ಯೆ: ಸಿಎಜಿ8029-8030 ಪಿಟಿಟಿ ಮಾಲೀಕರಾದ (ಸಿಎಬಿ-8029-8030) ಸೂಪರಿಂಟೆಂಡೆಂಟ್, ಡಿಸ್ಟ್ರಿಕ್ಟ್ ಪ್ರಿಸನ್ ಶಿವಮೊಗ್ಗ ಇವರು ದಿನಾಂಕ: 14.6.2004 ರಂದು ಅನುಪಯುಕ್ತತೆಯಲ್ಲಿರುವ ವಾಹನ ನೋಂದಣಿ ರದ್ದುಪಡಿಸಲು ಮನವಿ ಮಾಡಿದ್ದಾರೆ. ಹಾಗೂ ಅವಧಿ 30.11.2004 ರವರೆಗೆ ತೆರಿಗೆ ವಿನಾಯಿತಿ ಇದ್ದು ಪಾವತಿಸಿದ್ದು ಮತ್ತು ವಾಹನ ನಿರೀಕ್ಷಕರು ದಿನಾಂಕ: 22.5.04 ರಂದು ವಾಹನದ ಸ್ಥಿತಿಗತಿಯ ವರದಿಯನ್ನು ಸಲ್ಲಿಸಿ, ವಾಹನದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ.

ಆದುದರಿಂದ ಈ ಮೇಲೆ ವಿವರಿಸಿರುವ ಅಂಶವನ್ನು ಪರಿಶೀಲಿಸಿ, ಸದರಿ ವಾಹನದ ನೋಂದಣಿಯನ್ನು ರದ್ದುಪಡಿಸುವ ಸಲುವಾಗಿ ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂ: ಪ್ರಾಸಾಅ:ಶಿ:ಎಸ್‌ಆರ್:2004-05 ದಿನಾಂಕ: 21ನೇ ಜುಲೈ 2004**

ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಆದ ನಾನು ನನಗೆ ಪ್ರದತ್ತವಾದ ಅಧಿಕಾರದ ಮೇರೆಗೆ ಮೋಟಾರು ವಾಹನ ಸಂಖ್ಯೆ: ಸಿಎಜಿ-8029-30 ವಾಹನದ ಮೇಲೆ ಏನಾದರೂ ತೆರಿಗೆ ಬಾಕಿ ತನಿಖಾ ಆಕ್ಷೇಪಣೆಗಳು ಇರುವುದು ಕಂಡು ಬಂದಲ್ಲಿ ಸದರಿ ವಾಹನದ ಮಾಲೀಕರೆ ಪಾವತಿಸಬೇಕೆಂದು ಷರತ್ತಿನೊಂದಿಗೆ ನೋಂದಣಿಯನ್ನು ಮೋಟಾರು ವಾಹನ ಕಾಯ್ದೆ 1988ರ ವಿಧಿ 55(2) ರ ಪ್ರಕಾರ ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | | |
|---|---|---|---|
| 1) | ವಾಹನದ ಸಂಖ್ಯೆ | : | ಸಿಎಬಿ-8029-8030 (ಪಿಟಿಟಿ) |
| 2) | ನೋಂದಣಿ ದಿನಾಂಕ | : | 02-12-1986 |
| 3) | ವಾಹನದ ವರ್ಗ | : | ಪವರ್‌ಟಿಲ್ಲರ್, ಟ್ರೇಲರ್ |
| 4) | ತಯಾರಕರ ಹೆಸರು | : | ಮಿಥ್‌ಶುಬಿಶಿ (ಟಿಲ್ಲರ್) ಟ್ರೇಲರ್ ವಿಕ್ರಮ್ ಟ್ರೇಲರ್ |
| 5) | ಅಡಿಗಚ್ಚು ಸಂಖ್ಯೆ | : | ವಿ 78-06286 (ಟಿಲ್ಲರ್) ಐಟಿ 69 (ಟ್ರೇಲರ್) |
| 6) | ಯಂತ್ರದ ಸಂಖ್ಯೆ | : | ವಿ 78-05828 |
| 7) | ಮಾಲೀಕರು | : | ಸೂಪರಿಂಟೆಂಡೆಂಟ್, ಡಿಸ್ಟ್ರಿಕ್ಟ್ ಪ್ರಿಸನ್, ಶಿವಮೊಗ್ಗ |

ಪಿ.ಆರ್.1191 ಸಹಕಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ.

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಚಾಮರಾಜಪೇಟೆ ಬೆಂಗಳೂರು-18 ಇವರ ಕಾರ್ಯಾಲಯ**

**ಕ್ರಮಾಂಕ: ಡಿಆರ್‌ಬಿ-1:ನೋಂ.ರದ್ಧತಿ:15:2004-05 ದಿನಾಂಕ: 31ನೇ ಜುಲೈ 2004**

**ವಿಷಯ :** ಸಮಾಪನೆಯಲ್ಲಿರುವ ವಿನಾಯಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ರಾಜಗೋಪಾಲ ನಗರ, ಬೆಂಗಳೂರು, ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ :** 1. ಇದೇ ಕಛೇರಿ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ-1: ಎಲ್‌ಕ್ಯೂಡಿ:04:99-2000 ದಿನಾಂಕ: 30.10.99
2. ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-2 ಇವರ ಪತ್ರ ದಿನಾಂಕ: 28.7.2004
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಪತ್ರ ಸಂ:ಸನಿಬೆ 44: ಸಮಾಪನೆ:04:2004-05 ದಿನಾಂಕ: 31.7.2004

**ಪ್ರಸ್ತಾವನೆ:**

ವಿನಾಯಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ರಾಜಗೋಪಾಲ ನಗರ, ಬೆಂಗಳೂರು, ಈ ಸಂಘವು ನೋಂದಣಿ ಸಂಖ್ಯೆ: ಸನಿ44:ನೋಂದಣಿ:7:19769:93-94 ದಿನಾಂಕ: 22.12.1994 ರನ್ವಯ ನೋಂದಣಿಯಾಗಿದ್ದು ಹಲವಾರು ವರ್ಷಗಳಿಂದ ಈ ಸಂಘವು ಯಾವುದೇ ಕೆಲಸ ನಿರ್ವಹಿಸದೆ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಇದೇ ಕಛೇರಿ ಆದೇಶದಲ್ಲಿ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72 ರಡಿಯಲ್ಲಿ ಸಮಾಪನೆಗೊಳಿಸಿ ಆದೇಶ ಹೊರಡಿಸಿ ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-2 ಇವರನ್ನು ಸಮಾಪನಾಧಿಕಾರಿಯವರನ್ನಾಗಿ ನೇಮಕಮಾಡಲಾಗಿತ್ತು. ಸದರಿ ಸಮಾಪನಾಧಿಕಾರಿಯವರು ಈ ಸಂಘದ ದಾಖಲಾತಿಗಳಾವುವು ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯಾಗಿ ಸ್ವಯಂಪ್ರಭಾರ ವಹಿಸಿಕೊಂಡಿರುತ್ತಾರೆ.

ಉಲ್ಲೇಖ (2)ರಲ್ಲಿ ಸಂಘದ ಸಮಾಪನಾಧಿಕಾರಿಗಳು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಠರಾವು ಮಾಡಿ ಶಿಫಾರಸ್ಸು ಮಾಡಿರುವಂತೆ ಉಲ್ಲೇಖ (3)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ ಬೆಂಗಳೂರು ಇವರು ಈ ಸಂಘದ ನೋಂದಣಿಯನ್ನು ರದ್ದುಮಾಡಲು ಈ ಕೆಳಗಿನ ಕಾರಣಗಳನ್ನು ನೀಡಿ ಈ ಕಚೇರಿಗೆ ಶಿಫಾರಸ್ಸು ಮಾಡಿರುತ್ತಾರೆ.

1. ಈ ಸಂಘವು ನೋಂದಾಯಿತ ವಿಳಾಸದಲ್ಲಿ ಅಥವಾ ಇನ್ನಾವುದೇ ವಿಳಾಸದಲ್ಲಿ ಕಾರ್ಯನಿರ್ವಹಿಸದೇ ಅಸ್ಥಿತ್ವದಲ್ಲಿಲ್ಲದ ಕಾರಣ ಈ ಸಂಘದ ಲೆಕ್ಕ ಪುಸ್ತಕಗಳನ್ನು ಪ್ರಭಾರ ವಹಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲವೆಂದು ಸಮಾಪನಾಧಿಕಾರಿಗಳು ತಿಳಿಸಿರುತ್ತಾರೆ.
2. ಕಛೇರಿಯಲ್ಲಿನ ಲಭ್ಯ ದಾಖಲೆಗಳನ್ನು ಪರಿಶೀಲಿಸಲಾಗಿ ಈ ಸಂಘವು ಸರ್ಕಾರದಿಂದ ಯಾವುದೇ ಷೇರು ಅಥವಾ ಸಾಲವನ್ನು ಪಡೆದಿರುವುದಿಲ್ಲ.
3. ಲೆಕ್ಕ ಪರಿಶೋಧನಾ ಇಲಾಖೆಯಲ್ಲಿ ಈ ಸಂಘದ 1995-96ನೇ ಸಾಲಿನ ಲೆಕ್ಕ ಪರಿಶೋಧನಾ ವರದಿ ಲಭ್ಯವಿದ್ದು ಇದರಂತೆ ಆಸ್ತಿ-ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ಯಾವುದೇ ರಹದಾರಿ ಇಲ್ಲದ ಕಾರಣ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿ ನಡವಳಿಕೆ ಮಾಡಿರುತ್ತಾರೆ.
4. ಈ ಸಂಘವು ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರಿ ಬ್ಯಾಂಕಿನಲ್ಲಿ ಹಾಗೂ ಇನ್ನಾವುದೇ ಬ್ಯಾಂಕುಗಳಲ್ಲಿ ಖಾತೆಯನ್ನು ಹೊಂದಿರುವುದಿಲ್ಲ.

ಮೇಲಿನ ಅಂಶಗಳನ್ನು ವಿವರಿಸಿ ಸಮಾಪನಾಧಿಕಾರಿಗಳು ಈ ಸಂಘವು ಅಸ್ಥಿತ್ವದಲ್ಲಿಲ್ಲದೇ ಇರುವುದರಿಂದ ಇದರ ನೋಂದಣಿಯನ್ನು ರದ್ದುಪಡಿಸಲು ಕೋರಿದ್ದಾರೆಂದು ಸಹಾಯಕ ನಿಬಂಧಕರು ವಿವರಿಸಿ ಈ ಸಂಘವು ಅಸ್ಥಿತ್ವದಲ್ಲಿಲ್ಲದೇ ಇರುವುದರಿಂದ ಈ ಸಂಘದ ನೋಂದಣಿಯನ್ನು ರದ್ದುಪಡಿಸಿದಲ್ಲಿ ಸಾರ್ವಜನಿಕರಿಗಾಗಲೀ, ಸದಸ್ಯರಿಗಾಗಲೀ, ಸರ್ಕಾರಕ್ಕಾಗಲೀ ಯಾವುದೇ ನಷ್ಟ ಉಂಟಾಗುವುದಿಲ್ಲವೆಂದು ತಿಳಿಸಿ ಈ ಸಂಘದ ನೋಂದಣಿಯನ್ನು ಮುಂದುವರಿಸಿಕೊಂಡು ಹೋಗುವುದರಿಂದ ಪ್ರಯೋಜನವಿಲ್ಲದ ಕಾರಣ ರದ್ದುಪಡಿಸಿ ಆದೇಶ ಹೊರಡಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ. ಎ. ಕುಮಾರ್, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ನೋಂದಣಿ ಸಂಖ್ಯೆ: ಸನಿ44:ನೋಂದಣಿ:7:19769:93-94 ದಿನಾಂಕ: 22.12.1994ರಲ್ಲಿ ನೋಂದಣಿಯಾದ ವಿನಾಯಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ರಾಜಗೋಪಾಲ ನಗರ, ಬೆಂಗಳೂರು, ಈ ಸಂಘದ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ. ಈ ದಿನದಿಂದ ಈ ಸಂಘವು ಕಾರ್ಪೊರೇಟ್ ಬಾಡಿಯಾಗಿರುವ ಅಸ್ತಿತ್ವವನ್ನು ಕಳೆದುಕೊಂಡಿದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 31.7.2004 ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು-1,
ಬೆಂಗಳೂರು ನಗರ ಜಿಲ್ಲೆ.

ಪಿ.ಆರ್.1192

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಚಾಮರಾಜಪೇಟೆ**

**ಬೆಂಗಳೂರು-18 ಇವರ ಕಾರ್ಯಾಲಯ**

**ಕ್ರಮಾಂಕ: ಡಿಆರ್‌ಬಿ-1:ನೋಂ.ರದ್ದತಿ:12:2004-05 ದಿನಾಂಕ: 31ನೇ ಜುಲೈ 2004**

**ವಿಷಯ :** ಸಮಾಪನೆಯಲ್ಲಿರುವ ಅಮ್ಕೋ ಬ್ಯಾಟರೀಸ್ ನೌಕರರ ಸಹಕಾರ ಸಂಘ ನಿ., ಮೈಸೂರು ರಸ್ತೆ, ಬೆಂಗಳೂರು, ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** 1. ಇದೇ ಕಛೇರಿ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ-1: ಎಲ್‌ಕ್ಯೂಡಿ:34:2000-01 ದಿನಾಂಕ: 31.03.2001
2. ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-2 ಇವರ ಪತ್ರ ದಿನಾಂಕ: 26.7.2004
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಪತ್ರ ಸಂ:ಸನಿಬೆ 44: ಸಮಾಪನೆ:60:2004-05 ದಿನಾಂಕ: 31.7.2004

**ಪ್ರಸ್ತಾವನೆ:**

ಅಮ್ಕೋ ಬ್ಯಾಟರೀಸ್ ನೌಕರರ ಸಹಕಾರ ಸಂಘ ನಿ., ಮೈಸೂರು ರಸ್ತೆ, ಬೆಂಗಳೂರು, ಈ ಸಂಘವು ನೋಂದಣಿ ಸಂಖ್ಯೆ: ಎಆರ್‌ಬಿ:937 ದಿನಾಂಕ: 19.8.1957ರನ್ವಯ ನೋಂದಣಿಯಾಗಿದ್ದು ಹಲವಾರು ವರ್ಷಗಳಿಂದ ಈ ಸಂಘವು ಯಾವುದೇ ಕೆಲಸ ನಿರ್ವಹಿಸದೆ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಇದೇ ಕಛೇರಿ ಆದೇಶದಲ್ಲಿ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72 ರಡಿಯಲ್ಲಿ ಸಮಾಪನೆಗೊಳಿಸಿ ಆದೇಶ ಹೊರಡಿಸಿ ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-2 ಇವರನ್ನು ಸಮಾಪನಾಧಿಕಾರಿಯವರನ್ನಾಗಿ ನೇಮಕಮಾಡಲಾಗಿತ್ತು. ಸದರಿ ಸಮಾಪನಾಧಿಕಾರಿಯವರು ಈ ಸಂಘದ ದಾಖಲಾತಿಗಳಾವುವು ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯಾಗಿ ಸ್ವಯಂಪ್ರಭಾರ ವಹಿಸಿಕೊಂಡಿರುತ್ತಾರೆ.

ಉಲ್ಲೇಖ (2)ರಲ್ಲಿ ಸಂಘದ ಸಮಾಪನಾಧಿಕಾರಿಗಳು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಠರಾವು ಮಾಡಿ ಶಿಫಾರಸ್ಸು ಮಾಡಿರುವಂತೆ ಉಲ್ಲೇಖ (3)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ ಬೆಂಗಳೂರು ಇವರು ಈ ಸಂಘದ ನೋಂದಣಿಯನ್ನು ರದ್ದುಮಾಡಲು ಈ ಕೆಳಗಿನ ಕಾರಣಗಳನ್ನು ನೀಡಿ ಈ ಕಚೇರಿಗೆ ಶಿಫಾರಸ್ಸು ಮಾಡಿರುತ್ತಾರೆ.

1. ಈ ಸಂಘವು ನೋಂದಾಯಿತ ವಿಳಾಸದಲ್ಲಿ ಅಥವಾ ಇನ್ನಾವುದೇ ವಿಳಾಸದಲ್ಲಿ ಕಾರ್ಯನಿರ್ವಹಿಸದೇ ಅಸ್ಥಿತ್ವದಲ್ಲಿಲ್ಲದ ಕಾರಣ ಈ ಸಂಘದ ಲೆಕ್ಕ ಪುಸ್ತಕಗಳನ್ನು ಪ್ರಭಾರ ವಹಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲವೆಂದು ಸಮಾಪನಾಧಿಕಾರಿಗಳು ತಿಳಿಸಿರುತ್ತಾರೆ.
2. ಕಛೇರಿಯಲ್ಲಿನ ಲಭ್ಯ ದಾಖಲೆಗಳನ್ನು ಪರಿಶೀಲಿಸಲಾಗಿ ಈ ಸಂಘವು ಸರ್ಕಾರದಿಂದ ಯಾವುದೇ ಷೇರು ಅಥವಾ ಸಾಲವನ್ನು ಪಡೆದಿರುವುದಿಲ್ಲ.
3. ಲೆಕ್ಕ ಪರಿಶೋಧನಾ ಇಲಾಖೆಯಲ್ಲಿ ಲಭ್ಯವಿರುವಂತೆ ಈ ಸಂಘದ ಲೆಕ್ಕ ಪುಸ್ತಕಗಳು 1996-97ನೇಯ ಸಾಲಿನವರೆಗೆ ಲೆಕ್ಕ ತಪಾಸಣೆಯಾಗಿರುತ್ತದೆ. ಈ ಲೆಕ್ಕಪರಿಶೋಧನಾ ವರದಿ ಪ್ರಕಾರ ಈ ಸಂಘದ ಹೆಸರಿನಲ್ಲಿ ಬ್ಯಾಂಕ್ ಖಾತೆಯಲ್ಲಿದ್ದ ರೂ. 42,896/- ಗಳ ಹಣವನ್ನು ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ಇವರ ಸಮಾಪನಾ ಪಿ.ಡಿ. ಖಾತೆಗೆ ವರ್ಗಾಯಿಸಲಾಗಿದೆ. ಉಳಿದಂತೆ ಸಂಘದ ಆಸ್ತಿ-ಜವಾಬ್ದಾರಿಯನ್ನು ಖೈದುಗೊಳಿಸಲು ಯಾವುದೇ ದಾಖಲೆಗಳು ಲಭ್ಯವಿಲ್ಲವೆಂದು ತಿಳಿಸಲಾಗಿದೆ.

ಮೇಲಿನ ಅಂಶಗಳನ್ನು ವಿವರಿಸಿ ಸಮಾಪನಾಧಿಕಾರಿಗಳು ಈ ಸಂಘವು ಅಸ್ಥಿತ್ವದಲ್ಲಿಲ್ಲದೇ ಇರುವುದರಿಂದ ಇದರ ನೋಂದಣಿಯನ್ನು ರದ್ದುಪಡಿಸಲು ಕೋರಿದ್ದಾರೆಂದು ಸಹಾಯಕ ನಿಬಂಧಕರು ವಿವರಿಸಿ ಈ ಸಂಘವು ಅಸ್ಥಿತ್ವದಲ್ಲಿಲ್ಲದೇ ಇರುವುದರಿಂದ ಈ ಸಂಘದ ನೋಂದಣಿಯನ್ನು ರದ್ದುಪಡಿಸಿದಲ್ಲಿ ಸಾರ್ವಜನಿಕರಿಗಾಗಲೀ, ಸದಸ್ಯರಿಗಾಗಲೀ, ಸರ್ಕಾರಕ್ಕಾಗಲೀ ಯಾವುದೇ ನಷ್ಟ ಉಂಟಾಗುವುದಿಲ್ಲವೆಂದು ತಿಳಿಸಿ ಈ ಸಂಘದ ನೋಂದಣಿಯನ್ನು ಮುಂದುವರಿಸಿಕೊಂಡು ಹೋಗುವುದರಿಂದ ಪ್ರಯೋಜನವಿಲ್ಲದ ಕಾರಣ ರದ್ದುಪಡಿಸಿ ಆದೇಶ ಹೊರಡಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ. ಎ. ಕುಮಾರ್, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ನೋಂದಣಿ ಸಂಖ್ಯೆ: ಎಆರ್‌ಬಿ:937 ದಿನಾಂಕ: 19.8.1957ರಲ್ಲಿ ನೋಂದಣಿಯಾದ ಅಮ್ಕೋ ಬ್ಯಾಟರೀಸ್ ನೌಕರರ ಸಹಕಾರ ಸಂಘ ನಿ., ಮೈಸೂರು ರಸ್ತೆ, ಬೆಂಗಳೂರು, ಈ ಸಂಘದ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ. ಈ ದಿನದಿಂದ ಈ ಸಂಘವು ಕಾರ್ಪೊರೇಟ್ ಬಾಡಿಯಾಗಿರುವ ಅಸ್ಥಿತ್ವವನ್ನು ಕಳೆದುಕೊಂಡಿದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 31.7.2004 ರಂದು ಹೊರಡಿಸಲಾಗಿದೆ.

ಪಿ.ಆರ್.1193 ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಚಾಮರಾಜಪೇಟೆ**

**ಬೆಂಗಳೂರು-18 ಇವರ ಕಾರ್ಯಾಲಯ**

**ಕ್ರಮಾಂಕ: ಡಿಆರ್‌ಬಿ-1:ನೋಂ.ರದ್ದತಿ:14:2004-05 ದಿನಾಂಕ: 31ನೇ ಜುಲೈ 2004**

**ವಿಷಯ :** ಸಮಾಪನೆಯಲ್ಲಿರುವ ಬಸವೇಶ್ವರ ನಗರ ವುಮೆನ್ ಟೈಲರಿಂಗ್ ಸಹಕಾರ ಸಂಘ ನಿ., ಬಸವೇಶ್ವರ ನಗರ, ಬೆಂಗಳೂರು ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** 1. ಇದೇ ಕಛೇರಿ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ-1: ಎಲ್‌ಕ್ಯೂಡಿ:04:99-2000 ದಿನಾಂಕ: 30.10.99
2. ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-2 ಇವರ ಪತ್ರ ದಿನಾಂಕ: 27.7.2004.

3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಪತ್ರ ಸಂ: ಸನಿಬೆ 44:ಸಮಾಪನೆ: 05:2004-05 ದಿನಾಂಕ: 31.7.2004.

**ಪ್ರಸ್ತಾವನೆ:**

ಬಸವೇಶ್ವರ ನಗರ ವುಮೆನ್ ಟೈಲರಿಂಗ್ ಸಹಕಾರ ಸಂಘ ನಿ., ಬಸವೇಶ್ವರ ನಗರ, ಬೆಂಗಳೂರು, ಈ ಸಂಘವು ನೋಂದಣಿ ಸಂಖ್ಯೆ: ಎಆರ್‌ಬಿ:44: ಆರ್‌ಜಿಇಎನ್: 19749:93-94 ದಿನಾಂಕ: 9.2.1994 ರನ್ವಯ ನೋಂದಣಿಯಾಗಿದ್ದು ಹಲವಾರು ವರ್ಷಗಳಿಂದ ಈ ಸಂಘವು ಯಾವುದೇ ಕೆಲಸ ನಿರ್ವಹಿಸದೆ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಇದೇ ಕಛೇರಿ ಆದೇಶದಲ್ಲಿ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72 ರಡಿಯಲ್ಲಿ ಸಮಾಪನೆಗೊಳಿಸಿ ಆದೇಶ ಹೊರಡಿಸಿ ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-2 ಇವರನ್ನು ಸಮಾಪನಾಧಿಕಾರಿಯವರನ್ನಾಗಿ ನೇಮಕಮಾಡಲಾಗಿತ್ತು. ಸದರಿ ಸಮಾಪನಾಧಿಕಾರಿಯವರು ಈ ಸಂಘದ ದಾಖಲಾತಿಗಳಾವುವು ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯಾಗಿ ಸ್ವಯಂಪ್ರಭಾರ ವಹಿಸಿಕೊಂಡಿರುತ್ತಾರೆ.

ಉಲ್ಲೇಖ (2)ರಲ್ಲಿ ಸಂಘದ ಸಮಾಪನಾಧಿಕಾರಿಗಳು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಠರಾವು ಮಾಡಿ ಶಿಫಾರಸ್ಸು ಮಾಡಿರುವಂತೆ ಉಲ್ಲೇಖ (3)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ ಬೆಂಗಳೂರು ಇವರು ಈ ಸಂಘದ ನೋಂದಣಿಯನ್ನು ರದ್ದುಮಾಡಲು ಈ ಕೆಳಗಿನ ಕಾರಣಗಳನ್ನು ನೀಡಿ ಈ ಕಚೇರಿಗೆ ಶಿಫಾರಸ್ಸು ಮಾಡಿರುತ್ತಾರೆ.

1. ಈ ಸಂಘವು ನೋಂದಾಯಿತ ವಿಳಾಸದಲ್ಲಿ ಅಥವಾ ಇನ್ನಾವುದೇ ವಿಳಾಸದಲ್ಲಿ ಕಾರ್ಯನಿರ್ವಹಿಸದೇ ಅಸ್ಥಿತದಲ್ಲಿಲ್ಲದ ಕಾರಣ ಈ ಸಂಘದ ಲೆಕ್ಕ ಪುಸ್ತಕಗಳನ್ನು ಪ್ರಭಾರ ವಹಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲವೆಂದು ಸಮಾಪನಾಧಿಕಾರಿಗಳು ತಿಳಿಸಿರುತ್ತಾರೆ.
2. ಕಛೇರಿಯಲ್ಲಿನ ಲಭ್ಯ ದಾಖಲೆಗಳನ್ನು ಪರಿಶೀಲಿಸಲಾಗಿ ಈ ಸಂಘವು ಸರ್ಕಾರದಿಂದ ಯಾವುದೇ ಷೇರು ಅಥವಾ ಸಾಲವನ್ನು ಪಡೆದಿರುವುದಿಲ್ಲ.
3. ಲೆಕ್ಕ ಪರಿಶೋಧನಾ ಇಲಾಖೆಯಲ್ಲಿ ಈ ಸಂಘದ ಲೆಕ್ಕ ಪರಿಶೋಧನೆ ನಡೆಸಿರುವ ಬಗ್ಗೆ ಯಾವುದೇ ವರದಿಗಳು ದೊರಕಿರುವುದಿಲ್ಲ.
4. ಈ ಸಂಘವು ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರಿ ಬ್ಯಾಂಕಿನಲ್ಲಿ ಯಾವುದೇ ಖಾತೆಯನ್ನು ಹೊಂದಿರುವುದಿಲ್ಲ.

ಮೇಲಿನ ಅಂಶಗಳನ್ನು ವಿವರಿಸಿ ಸಮಾಪನಾಧಿಕಾರಿಗಳು ಈ ಸಂಘವು ಅಸ್ತಿತ್ವದಲ್ಲಿಲ್ಲದೇ ಇರುವುದರಿಂದ ಇದರ ನೋಂದಣಿಯನ್ನು ರದ್ದುಪಡಿಸಲು ಕೋರಿದ್ದಾರೆಂದು ಸಹಾಯಕ ನಿಬಂಧಕರು ವಿವರಿಸಿ ಈ ಸಂಘವು ಅಸ್ತಿತ್ವದಲ್ಲಿಲ್ಲದೇ ಇರುವುದರಿಂದ ಈ ಸಂಘದ ನೋಂದಣಿಯನ್ನು ರದ್ದುಪಡಿಸಿದಲ್ಲಿ ಸಾರ್ವಜನಿಕರಿಗಾಗಲೀ, ಸದಸ್ಯರಿಗಾಗಲೀ, ಸರ್ಕಾರಕ್ಕಾಗಲೀ ಯಾವುದೇ ನಷ್ಟ ಉಂಟಾಗುವುದಿಲ್ಲವೆಂದು ತಿಳಿಸಿ ಈ ಸಂಘದ ನೋಂದಣಿಯನ್ನು ಮುಂದುವರಿಸಿಕೊಂಡು ಹೋಗುವುದರಿಂದ ಪ್ರಯೋಜನವಿಲ್ಲದ ಕಾರಣ ರದ್ದುಪಡಿಸಿ ಆದೇಶ ಹೊರಡಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001 ದಿನಾಂಕ: 21.11.2001ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ. ಎ. ಕುಮಾರ್ ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ನೋಂದಣಿ ಸಂಖ್ಯೆ: ಎಆರ್‌ಬಿ:44:ಆರ್‌ಜಿಇಎನ್: 19749:93-94 ದಿನಾಂಕ: 9.2.1994ರಲ್ಲಿ ನೋಂದಣಿಯಾದ ಬಸವೇಶ್ವರ ನಗರ ವುಮೆನ್ ಟೈಲರಿಂಗ್ ಸಹಕಾರ ಸಂಘ ನಿ. ಬಸವೇಶ್ವರ ನಗರ, ಬೆಂಗಳೂರು ಈ ಸಂಘದ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ. ಈ ದಿನದಿಂದ ಈ ಸಂಘವು ಕಾರ್ಪೊರೇಟ್ ಬಾಡಿಯಾಗಿರುವ ಅಸ್ಥಿತ್ವವನ್ನು ಕಳೆದುಕೊಂಡಿದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 31.7.2004 ರಂದು ಹೊರಡಿಸಲಾಗಿದೆ.

ಪಿ.ಆರ್.1194 ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ,**

**ಕಾರವಾರ ಇವರ ನ್ಯಾಯಾಲಯ**

**ಸಂ.ಎ3:ಸಿಎಜಿ:ವಿವ-03/03-04 ದಿನಾಂಕ: 6ನೇ ಜುಲೈ 2004**

**ಉಪಸ್ಥಿತರು :** ಶ್ರೀ ಜಿ. ವಿ. ರಂಗರಾವ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**ಫಿರ್ಯಾದುದಾರರು :** ವಿರುದ್ಧ **ಅರ್ಜಿದಾರ :**

1. ವಲಯ ಅರಣ್ಯಾಧಿಕಾರಿ, ಕದ್ರಾ ವಲಯ

1. ಶ್ರೀ ದಿಗಂಬರ ವಾಮನ ಹಳದನಕರ, ವರ್ಷ 51, ಉದ್ಯೋಗಃ ಉಸುಕಿನ ವ್ಯವಹಾರ, ಮುಕ್ಕಾಂಃ ಕೋಡಿಬಾಗ, ಕಾರವಾರ (ವಾಹನ ಮಾಲೀಕರು)

## ನ್ಯಾಯಾಲಯದ ತೀರ್ಪು

**ಪ್ರಸ್ತಾವನೆ:**

1) ವಲಯ ಅರಣ್ಯಾಧಿಕಾರಿ, ಕದ್ರಾರವರು ಈ ನ್ಯಾಯಾಲಯಕ್ಕೆ ದಿನಾಂಕ: 22.07.2003 ರಂದು ವರದಿ ಸಲ್ಲಿಸುತ್ತಾ ತಾವು ಎಫ್.ಐ.ಆರ್. ನಂ. 3/03-04 ದಿನಾಂಕ: 21.07.2003 ರನ್ವಯ ಅನಧಿಕೃತವಾಗಿ ಸಾಗವಾನಿ ಕಟ್ಟಿಗೆಯನ್ನು ಸಾಗಿಸುತ್ತಿದ್ದ ಲಾರಿ ನಂ. ಕೆಎ-30 1191ನ್ನು ಮಾಲು ಸಮೇತ ಜಪ್ತಿ ಮಾಡಿ ಈ ಪ್ರಾಧಿಕಾರದ ಎದುರಿಗೆ ದಿನಾಂಕ: 22.07.2003 ರಂದು ಮುಂದಿನ ಕ್ರಮಕ್ಕಾಗಿ ಹಾಜರುಪಡಿಸಿರುತ್ತಾರೆ. ಜಪ್ತಿ ಮಾಡಲಾದ ಲಾರಿಯಲ್ಲಿ ಸಾಗ ನಗಗಳು 16 (ಹದಿನಾರು)-1.469 ಘಮೀ. ಇದ್ದು, ಅದರೊಂದಿಗೆ ಲಾರಿಯ ಜೊತೆಯಲ್ಲಿದ್ದ ವಾಹನದ ಚಾಲಕ ಶ್ರೀ ಶಾಂತಾರಾಮ ನಾರಾಯಣ ದೇವಿದಾಸ ಸಾ: ಗೋಪಶಿಟ್ಟಾ ಹಾಗೂ ಶ್ರೀ ವಿಜಯ ಕೋಯರ ಗಾಂವಕಾರ ಸಾ: ಹೋಟೆಗಾಳಿ ಇವರನ್ನು ಕೂಡ ದಸ್ತಗಿರಿ ಮಾಡಲಾಗಿದೆ. ಸದರಿ ವಾಹನವನ್ನು ಆಪಾದಿತರು ಹಾಗೂ ಇತರೇ ಸಂಬಂಧಿತ ದಾಖಲೆಗಳೊಂದಿಗೆ ಹಾಜರುಪಡಿಸಿದ ಕೂಡಲೇ ಸದರಿ ದಾಖಲೆಗಳು, ವರದಿಗಳು ಹಾಗೂ ಹಾಜರುಪಡಿಸಿದ ವಾಹನ ಹಾಗೂ ಕಳ್ಳ ಸಾಗಾಣಿಕೆ ಮಾಡಿದ ಅರಣ್ಯ ಉತ್ಪನ್ನ (ಸಾಗವಾನಿ ನಾಟುಗಳು)ಗಳನ್ನು ಪರಿಶೀಲಿಸಲಾಗಿ ಅವು ಒಂದಕ್ಕೊಂದು ತಾಳೆಯಾಗುತ್ತಿದ್ದರಿಂದ ಸದರಿ ವಾಹನ ಹಾಗೂ ಸಾಗವಾನಿ ನಾಟುಗಳನ್ನು ಸುರಕ್ಷತೆಗಾಗಿ ಶಹರ ವನಪಾಲಕ, ಕಾರವಾರ ಇವರ ತಾಬಾಕ್ಕೆ ಈ ನ್ಯಾಯಾಲಯದ ಆದೇಶ ಸಂ: ಎ3:ಸಿಓಸಿ:ಸಿಆರ್-03:03-04 ದಿನಾಂಕ: 22.07.2003 ರನ್ವಯ ನೀಡಲಾಗಿದೆ.

ವಾಹನದ ಮಾಲೀಕರಾದ ಶ್ರೀ ದಿಗಂಬರ ವಾಮನ ಹಳದನಕರ ಇವರಿಗೆ ಈ ನ್ಯಾಯಾಲಯದ ಆದೇಶ ಸಂ: ಎ3:ಸಿಓಸಿ: ಸಿಆರ್-03:03-04 ದಿನಾಂಕ: 22.07.2003 ರಡಿಯಲ್ಲಿ ನೋಟಿಸು ಜಾರಿ ಮಾಡಿ, ಅರಣ್ಯ ಅಪರಾಧದಲ್ಲಿ ಉಪಯೋಗಿಸಲ್ಪಟ್ಟು ಸಿಕ್ಕಿ ಹಾಕಿಕೊಂಡಿರುವ ವಾಹನ ಲಾರಿ ನಂ. ಕೆಎ-30 1191ನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂಬ ಬಗ್ಗೆ ಸಮಜಾಯಿಷಿ ಕೇಳಲಾಗಿ, ಅರ್ಜಿದಾರರು ದಿನಾಂಕ: 2.08.2003 ರಂದು ತಾವು ಸ್ವತಃ ಅರ್ಜಿಸಲ್ಲಿಸಿ ಹಾಗೂ ದಿನಾಂಕ: 11.8.2003 ರಂದು ತಮ್ಮ ನ್ಯಾಯವಾದಿಗಳ ಮುಖಾಂತರ ಅರ್ಜಿ ಸಲ್ಲಿಸುತ್ತಾ ತಾನು ಟ್ರಕ್ ನಂ. ಕೆಎ. 30-1191ರ ಮಾಲೀಕನಿರುತ್ತೇನೆ. ಸದರಿ ವಾಹನಕ್ಕೆ ಶ್ರೀ ಶಾಂತಾರಾಮ ದೇವದಾಸ ಇವರು ಚಾಲಕನಿದ್ದು, ವಿಜಯ ಎನ್ನುವವರು ಕ್ಲೀನರ್ ಇರುತ್ತಾನೆ. ತಾನು ದಿನಾಂಕ: 21.07.2003 ರಂದು ಕೋಡಿಬಾಗದ ಮಧ್ಯೇವಾಡಾದ ನಿವಾಸಿ ಶ್ರೀ ರಾಮದಾಸ ಪುಂಡ್ಲೀಕ ಕಲ್ಗುಟಕರ ಎನ್ನುವವರಿಗೆ ಅಧಿಕೃತ ಪಾಸ್ ಹೊಂದಿದ ಹಳೆಮನೆ ಕಟ್ಟಿಗೆ ತರುವುದಕ್ಕಾಗಿ ಬಾಡಿಗೆ ಕೊಟ್ಟಿದ್ದು ಇದ್ದು, ಸದ್ರಿ ಲಾರಿಯಲ್ಲಿ ಅನಧಿಕೃತವಾಗಿ 16 ತುಂಡುಗಳನ್ನು ಸಾಗಿಸಿದ ವಿಷಯ ಕಾರಣ ಕೇಳುವ ನೋಟಿಸು ತಲುಪಿದ ನಂತರವೇ ತಿಳಿಸಿದೆ. ಇದರ ಬಗ್ಗೆ ತನಗೆ ಯಾವುದೇ ಸಂಬಂಧವಿಲ್ಲಾ. ತಾನು ಯಾವುದೇ ಅನಧಿಕೃತ ವಸ್ತುಗಳನ್ನು ಸಾಗಿಸಲು ಚಾಲಕನಿಗಾಗಲೀ ಅಥವಾ ಕ್ಲೀನರ್‌ನಿಗಾಗಲೀ ಪರವಾನಗಿ ನೀಡಿದ್ದು ಇರುವುದಿಲ್ಲ. ಸದರಿ ವಾಹನವೇ ತನ್ನ ಕುಟುಂಬದ ಜೀವನೋಪಾಯದ ಸಾಧನವಾಗಿದೆ. ಸದರಿ ವಾಹನವನ್ನು ಬಿಸಿಲು ಮಳೆಗಾಳಿಗೆ ಇಡುವುದರಿಂದ ಅದು ಜಂಗು ತಿಂದು ಹಾಳಾಗಿ ಅದರ ಮುಖಬೆಲೆಯೂ ಕಡಿಮೆಯಾಗಿ ತನಗೆ ಹಾನಿ ಆಗುವುದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳದೇ ತನಗೆ ಮಧ್ಯಂತರ ತಾಬಾಕ್ಕೆ ಬಿಟ್ಟು ಕೊಡಬೇಕಾಗಿ ಕೋರುತ್ತಾರೆ. ಹಾಗೂ ನ್ಯಾಯಾಲಯವು ವಿಧಿಸಿದ ಷರತ್ತುಗಳೊಂದಿಗೆ ಆದೇಶಿಸಿದ ಪ್ರಕಾರ ನಡೆಯಲು ಸಿದ್ದನಿರುವುದಾಗಿ ಹೇಳಿದ್ದಾರೆ.

3) ಸದರಿ ವಾಹನದ ಮಾಲೀಕರ ದಿನಾಂಕ: 11.08.2003ರ ಅರ್ಜಿಗೆ ಸರ್ಕಾರದ ಪರವಾಗಿ ಆಕ್ಷೇಪಣೆಯನ್ನು ಪ್ರಭಾರ ಸಹಾಯಕ ಅಭಿಯೋಗ ನಿರ್ದೇಶಕರು, ಕಾರವಾರ ದಿನಾಂಕ: 13.08.2003 ರಂದು ಸಲ್ಲಿಸುತ್ತಾ ಸದರಿ ಲಾರಿ ನಂ. ಕೆಎ 30-1191 ಇದನ್ನು ಯಾವುದೇ ಪಾಸ್ ಯಾ ಪರ್ಮಿಟ್ ಇಲ್ಲದೇ ಅನಧಿಕೃತವಾಗಿ 16 (ಹದಿನಾರು) ಸಾಗ ತುಂಡುಗಳನ್ನು ಸಾಗಿಸುತ್ತಿರುವಾಗ ಜಪ್ತಿ ಮಾಡಿದ್ದು ಇರುತ್ತದೆ. ಈ ಬಗ್ಗೆ ಲಾರಿಯ ಚಾಲಕ ಹಾಗೂ ಕ್ಲೀನರ್ ಇವರನ್ನು ಗುನ್ನೆ ಸ್ಥಳದಲ್ಲಿಯೇ ವಾಹನ ಹಾಗೂ ಅನಧಿಕೃತವಾಗಿ ಅರಣ್ಯ ಉತ್ಪನ್ನಗಳನ್ನು ಸಾಗಿಸುವಾಗ ಹಿಡಿದು, ಸದರಿ ಸಾಗ ತುಂಡುಗಳಿಗೆ ಯಾವುದೇ ಪಾಸ್ ಯಾ ಪರ್ಮಿಟ್ ಇಲ್ಲವೆಂಬ ಬಗ್ಗೆ ಅವರಿಂದ ಹೇಳಿಕೆ ಪಡೆಯಲಾಗಿದೆ. ಆದ್ದರಿಂದ ಕರ್ನಾಟಕ ಅರಣ್ಯ ಕಾಯ್ದೆ ಕಲಂ ನಂ. 71(ಎ) 63, ಹಾಗೂ 144 ರಡಿಯಲ್ಲಿ ಅಪರಾಧ ಎಸಗಿದ್ದು, ಸದರಿ ವಾಹನವನ್ನು ಬಿಡುಗಡೆ ಮಾಡದೇ ಮುಟ್ಟುಗೋಲು ಹಾಕಿಕೊಳ್ಳಬೇಕಾಗುತ್ತದೆ ಎಂದಿದ್ದಾರೆ. ಸದರಿ ವಾಹನವನ್ನು ಬಿಡುಗಡೆ ಮಾಡಿದ್ದಲ್ಲಿ ಪುನಃ ಇಂತಹದೇ ಗುನ್ನೆ ಮಾಡಲು ಪ್ರಚೋದನೆ ನೀಡಿದಂತಾಗುತ್ತದೆ. ಇದರಿಂದ ಅರಣ್ಯ ನಾಶವಾಗಿ ವನ್ಯಜೀವಿ ಹಾಗೂ ಮನುಷ್ಯನ ಜೀವಕ್ಕೆ ತೊಂದರೆ ಉಂಟಾಗುವುದು ಎನ್ನುತ್ತಾ ಅರ್ಜಿದಾರರು ಅರ್ಜಿಯಲ್ಲಿ ಕಾಣಿಸಿದ ಕಾರಣಗಳು ಈ ವಾಹನವನ್ನು ಬಿಡುಗಡೆ ಮಾಡಲು ಸೂಕ್ತ ಕಾರಣಗಳಾಗಿರುವುದಿಲ್ಲವಾದ್ದರಿಂದ ಸದರಿ ಅಪರಾಧದಲ್ಲಿ ಬಳಸಿದ ವಾಹನವನ್ನು ಬಿಡುಗಡೆ ಮಾಡಬಾರದಾಗಿ ವಿನಂತಿಸಿದ್ದಾರೆ.

ಎರಡೂ ಕಡೆಯ ವಾದ ವಿವಾದಗಳನ್ನು ಪರಿಶೀಲಿಸಿದಾಗ ಈ ನ್ಯಾಯಾಲಯಕ್ಕೆ ಸದರಿ ವಾಹನವನ್ನು ಮಧ್ಯಂತರ ಬಿಡುಗಡೆ ಮಾಡಬಹುದಾದಂತಹ ಸೂಕ್ತ ಕಾರಣಗಳು ಕಂಡು ಬರದೇ ಇದ್ದದರಿಂದ ಈ ನ್ಯಾಯಾಲಯದ ದಿನಾಂಕ: 8.09.2003 ರ ಆದೇಶದಲ್ಲಿ ಅರ್ಜಿದಾರರ ಮನವಿಯನ್ನು ತಳ್ಳಿ ಹಾಕಲಾಗಿತ್ತು.

4) ಸದರಿ ಆದೇಶದ ವಿರುದ್ಧ ಅರ್ಜಿದಾರರು ಮಾನ್ಯ ಸೆಶನ್ ಕೋರ್ಟ್, ಕಾರವಾರ ಜಿಲ್ಲಾ ಇವರಲ್ಲಿ ಕ್ರಿಮಿನಲ್ ಅಪೀಲ್ ನಂ. 86:03 ರಡಿಯಲ್ಲಿ ಮನವಿ ಸಲ್ಲಿಸಿ ಸದರಿ ವಾಹನವು ಮಳೆ, ಗಾಳಿ ಬಿಸಿಲಿಗೆ ತೆರೆದು ಇಡುವುದರಿಂದ ಅದು ಹಾಳಾಗುವುದಲ್ಲದೇ ಅದರ ಬೆಲೆಯೂ ಕಡಿಮೆ ಆಗುತ್ತದೆ. ವಾಹನವನ್ನು ಮಧ್ಯಂತರ ತಾಬಾಕ್ಕೆ ಬಿಡುಗಡೆ ಮಾಡುವಾಗ ವಿಧಿಸಿದ ಶರ್ತುಗಳನ್ನು ಪಾಲಿಸಲು ಅರ್ಜಿದಾರರು ಸಿದ್ಧರಿರುವುದಾಗಿ ಹೇಳಿದ್ದಾರೆ. ಮಾನ್ಯ ನ್ಯಾಯಾಲಯವು ಅರ್ಜಿದಾರರ ಪರ ನ್ಯಾಯವಾದಿಗಳು ಉಲ್ಲೇಖಿಸಿದ 'ಸುಂದರಭಾಯಿ ಅಂಭಾಲಾಲ ದೇಸಾಯಿ ಹಾಗೂ ಇತರರ ವಿರುದ್ಧ ಗುಜರಾತ್ ರಾಜ್ಯ ಸರ್ಕಾರ (ಐಎಲ್‌ಆರ್ 2003 ಕರ್ನಾಟಕ-1135)

ಪ್ರಕರಣದಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಗುನ್ಹೆಯಲ್ಲಿ ಜಪ್ತಾದ ಮುದ್ದೆಮಾಲು, ವಾಹನಗಳನ್ನು ಮಧ್ಯಂತರ ತಾಬಾಕ್ಕೆ ಕೊಡುವ ಬಗ್ಗೆ ನೀಡಲಾದ ನಿರ್ದೇಶನಗಳನ್ನು ಎತ್ತಿ ತೋರಿಸುತ್ತ ಪ್ರಸ್ತುತ ಪ್ರಕರಣದಲ್ಲಿ ನಡೆದಿದೆ ಎನ್ನಲಾದ ಗುನ್ಹೆಯು ಅರ್ಜಿದಾರರಿಗೆ ಗೊತ್ತಿದ್ದು ಆಗಿದೆ ಅನ್ನುವುದು ಇನ್ನೂ ನಿರ್ಧಾರವಾಗಬೇಕಿದೆ. ಅಲ್ಲಿಯವರೆಗೂ ವಾಹನವು ಹಾಳಾಗುವುದನ್ನು ತಪ್ಪಿಸಲು ಕೆಲವೊಂದು ಷರತ್ತುಗಳೊಂದಿಗೆ (ಇಂಡೆಮ್ನಿಟಿ ಬಾಂಡ್, ಬ್ಯಾಂಕ್ ಗ್ಯಾರಂಟಿ) ವಾಹನವನ್ನು ಅರ್ಜಿದಾರರ ಮಧ್ಯಂತರ ತಾಬಾಕ್ಕೆ ಕೊಡಲು ಆದೇಶ ಮಾಡಲಾಗಿದೆ.

ಇದೇ ನ್ಯಾಯಾಲಯದ ಇದೇ ಆದೇಶದ ಪ್ಯಾರಾ. ನಂ. 8 ರಲ್ಲಿ 'ಉದ್ಧರಿಸಲಾದ ಸಾಲುಗಳು'

"The main ingradient of the provision of the vehicle used for transportation of the forest produce is that, the illegal activities must be within the knowledge of the owner of the vehicle, the burden of proof of it is on the owner of the vehicle......................"

ಇವುಗಳನ್ನು ಗಮನಿಸುವುದು ಅವಶ್ಯವೆಂದು ಕಂಡು ಬರುತ್ತದೆ.

5) ಮಾನ್ಯ ಸೆಶನ್ ನ್ಯಾಯಾಲಯದ ಆದೇಶದನ್ವಯ ಅರ್ಜಿದಾರರಿಂದ ಸೂಕ್ತ ಇಂಡೆಮ್ನಿಟಿ ಬಾಂಡ್, ಬ್ಯಾಂಕ್ ಗ್ಯಾರಂಟಿ ಮುಚ್ಚಳಿಕೆ ಪತ್ರ ಪಡೆದುಕೊಂಡು ವಾಹನವನ್ನು ಮಧ್ಯಂತರ ತಾಬಾಕ್ಕೆ ಬಿಟ್ಟು ಕೊಡಲಾಗಿದೆ. ಹಾಗೂ ಈ ನ್ಯಾಯಾಲಯದಲ್ಲಿ ವಿಚಾರಣೆಯನ್ನು ಮುಂದುವರಿಸಲಾಗಿದೆ.

**ಸರ್ಕಾರದ ಪರವಾಗಿ ಸಾಕ್ಷಿಗಳು:**

1) ಶ್ರೀ ಸಿ. ಕೆ. ಖಾರ್ವಿ, ವಲಯ ಅರಣ್ಯ ಅಧಿಕಾರಿ (ಪಿ.ಡಬ್ಲ್ಯೂ-1)

2) ಶ್ರೀ ವೇಲುಸಾಬ ಶಂಕ್ರ ತೇವರ, (ಪಿ.ಡಬ್ಲ್ಯೂ-2)

3) ಶ್ರೀ ರಮೇಶ ವಿಠ್ಠಲ ಹರಿಜನ (ಪಿ.ಡಬ್ಲ್ಯೂ-3)

**ಪ್ರತಿವಾದಿಗಳ ಪರವಾಗಿ:**

1) ಶ್ರೀ ದಿಗಂಬರ ವಾಮನ ಹಳದನಕರ, (ಡಿ.ಡಬ್ಲ್ಯೂ-1)

6) ಈ ಮೇಲ್ಕಾಣಿಸಿದ ವಾದಿ ಮತ್ತು ಪ್ರತಿವಾದಿ ಸಾಕ್ಷಿಗಳ ಹೇಳಿಕೆಗಳನ್ನು ಅವಲೋಕಿಸಿದ ನಂತರ, ಪ್ರಕರಣಕ್ಕೆ ಸಂಬಂಧಿಸಿದಂತೆ ಅರ್ಜಿದಾರರ ಪರ ವಕೀಲರ ಮತ್ತು ಸರ್ಕಾರದ ಪರ ವಕೀಲರ ಲಿಖಿತ ವಾದ ವಿವಾದಗಳನ್ನು ಆಲಿಸಿದ ನಂತರ ಹಾಗೂ ಹಾಜರುಪಡಿಸಿದ ದಾಖಲೆಗಳನ್ನು ಅವಲೋಕಿಸಿದಾಗ ಈ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗವಾನಿ ನಾಟುಗಳನ್ನು ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದೆಯೇ ಸಾಗಿಸುತ್ತಿದ್ದ ಬಗ್ಗೆ ಗುನ್ಹೆ ಆಗಿದೆಯೇ?

ಆ) ಮೇಲೆ ನಮೂದಿಸಿದ ಸಾಗವಾನಿ ನಾಟುಗಳ ಕಳ್ಳ ಸಾಗಣೆ ಮಾಡುವಲ್ಲಿ ವಾಹನ ಸಂಖ್ಯೆ: ಕೆಎ-30-1191 ಎಂಬ ಲಾರಿಯನ್ನು ಉಪಯೋಗ ಮಾಡಲಾಗಿದೆಯೇ?

ಇ) ಈ ಗುನ್ಹೆಯನ್ನು ವಾಹನದ ಮಾಲೀಕ ಅಥವಾ ಅವನ ಏಜಂಟ್ ಅಥವಾ ಅದರ ಜವಾಬ್ದಾರಿ ಹೊಂದಿದ ವ್ಯಕ್ತಿಗಳಿಗೆ ಗೊತ್ತಿದ್ದು ಮಾಡಲಾಗಿದೆಯೇ? ಹಾಗೂ ಅವರು ಈ ಗುನ್ಹೆಯಲ್ಲಿ ಶಾಮೀಲಾಗಿದ್ದಾರೆಯೇ? ಹಾಗೂ ಈ ಲಾರಿಯನ್ನು ಸಾಗವಾನಿ ನಾಟುಗಳ ಕಳ್ಳ ಸಾಗಾಣಿಕೆಗೆ ಬಳಕೆಯಾಗದಂತೆ ಲಾರಿಯ ಮಾಲೀಕ ಅವರ ಏಜೆಂಟ್ ಅಥವಾ ಈ ವಾಹನದ ಜವಾಬ್ದಾರಿಯನ್ನು ಹೊಂದಿದವರು ಸಾಕಷ್ಟು ಮುಂಜಾಗ್ರತಾ ಕ್ರಮವನ್ನು ಕೈಗೊಳ್ಳಲು ವಿಫಲರಾಗಿದ್ದಾರೆಯೇ?

ಈ) ಈ ವಾಹನವನ್ನು ಅರಣ್ಯ ಕಾಯ್ದೆ 71-ಎ ಅಧಿನಿಯಮದಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.

ಅಂಶ ನಂ. (ಅ) - ಹೌದು

ಅಂಶ ನಂ. (ಆ) - ಹೌದು

ಅಂಶ ನಂ. (ಇ) - ಹೌದು

ಅಂಶ ನಂ. (ಈ) - ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸಿದೆ.

**ಅಂಶ ನಂ. (ಅ)**

ವಲಯ ಅರಣ್ಯ ಅಧಿಕಾರಿ, ಕದ್ರಾ ಇವರು ದಿನಾಂಕ: 22.07.2003 ರಂದು ಎಫ್.ಐ.ಆರ್. ನಂ. 3/03-04 ದಿನಾಂಕ: 21.07.2003 ರನ್ವಯ ಅರಣ್ಯ ಅಪರಾಧದಲ್ಲಿ ಸಿಕ್ಕಿ ಹಾಕಿಕೊಂಡ ಮುದ್ದೆಮಾಲು

ಅ) ಟ್ರಕ್ ನಂ. ಕೆಎ-30-1191

ಆ) ಸದರಿ ಟ್ರಕ್ಕಿನಲ್ಲಿ ಅಕ್ರಮವಾಗಿ ಸಾಗಿಸಲಾಗುತ್ತಿದ್ದ 16 (ಹದಿನಾರು) ಸಾಗವಾನಿ ತುಂಡುಗಳು (1.469 ಘಮೀ). ಇವುಗಳನ್ನು ಜಪ್ತಿಪಡಿಸಿಕೊಂಡು ಈ ನ್ಯಾಯಾಲಯದ ಎದುರು ಹಾಜರುಪಡಿಸಿದ್ದಾರೆ. ಸದರಿಯವರು ಹಾಜರುಪಡಿಸಿದ

(1) ಸೀಜರ್ ರಿಪೋರ್ಟ್ (ಇಎಕ್ಸ್‌ಪಿ-3)

(2) ಪ್ರಥಮ ಮಾಹಿತಿ ವರದಿ (ಇಎಕ್ಸ್‌ಪಿ-2)

(3) ಪಂಚನಾಮೆ (ಇಎಕ್ಸ್‌ಪಿ-1)

(4) ಗುನ್ಹೆಯಲ್ಲಿ ಅಟಕಾಯಿಸಲಾದ ಲಾರಿ ನಂ. ಕೆಎ-30-1191 ಹಾಗೂ ಅದರಲ್ಲಿದ್ದ ಸಾಗುವಾನಿ ಕಟ್ಟಿಗೆ ಹಾಗೂ ವಾಹನದ ಚಾಲಕ ಮತ್ತು ಕ್ಲೀನರ್ ಇವರೊಂದಿಗೆ ತೆಗೆಯಲಾದ ಫೋಟೊಗಳು (ಇಎಕ್ಸ್‌ಪಿ-4, ಇಎಕ್ಸ್‌ಪಿ-5, ಇಎಕ್ಸ್‌ಪಿ-6) ಇದೂ ಅಲ್ಲದೇ,

(5) ಶ್ರೀ ಸಿ. ಕೆ. ಖಾರ್ವಿ, ವಲಯ ಅರಣ್ಯ ಅಧಿಕಾರಿ, ಕದ್ರಾ (ಪಿ.ಡಬ್ಲ್ಯೂ-1)
(6) ಶ್ರೀ ವೇಲುಸಾಬ ಶಂಕ್ರತೇವರ, (ಪಿ.ಡಬ್ಲ್ಯೂ-2)
(7) ಶ್ರೀ ರಮೇಶ ವಿಠ್ಠಲ ಹರಿಜನ (ಪಿ.ಡಬ್ಲ್ಯೂ-3)

ಇವರುಗಳು ನ್ಯಾಯಾಲಯದಲ್ಲಿ ನೀಡಿರುವ ಸಾಕ್ಷಿ ಹೇಳಿಕೆಗಳನ್ನು ಪರಿಶೀಲಿಸಲಾಗಿ ದಿನಾಂಕ: 21.07.2003 ರಂದು ಮಧ್ಯಾಹ್ನ ಸುಮಾರು 2.00 ಗಂಟೆ ಹೊತ್ತಿಗೆ ಸುಳಗೇರಿ ಅರಣ್ಯ ಸ.ನಂ. 4ರ ಸುಳಗೇರಿ ರಸ್ತೆಬದಿಯಲ್ಲಿ ಲಾರಿ ನಂ. ಕೆಎ-30-1191 ರಲ್ಲಿ ಅಕ್ರಮವಾಗಿ 16 (ಹದಿನಾರು) 1.469 ಘಮೀ. ಸಾಗ ತುಂಡುಗಳನ್ನು ಸಾಗಿಸುತ್ತಿದ್ದಾಗ ವಾಹನವನ್ನು ಅದರ ಚಾಲಕ ಶ್ರೀ ಶಾಂತಾರಾಮ ನಾರಾಯಣ ದೇವದಾಸ ಸಾ: ಗೋಪಶಿಟ್ಟಾ ಹಾಗೂ ವಾಹನದ ಕ್ಲೀನರ್ ಶ್ರೀ ವಿಜಯಕೊಯರ ಗಾಂವಕಾರ ಸಾ: ಗೋಟೆಗಾಳಿ ಇವರ ಸಹಿತ ಜಪ್ತಿ ಮಾಡಲಾಗಿದೆ. ಸದರಿ ಸಾಗ ತುಂಡುಗಳನ್ನು ಪರಿಶೀಲಿಸಲಾಗಿ ಅವುಗಳಿಗೆ ಸರ್ಕಾರದ ಯಾವುದೇ ರೀತಿಯ ಛಪ್ಪಾ ಗುರುತುಗಳು ಕಂಡು ಬಂದಿಲ್ಲಾ. ಹಾಗೂ ವಾಹನದ ಚಾಲಕ ಹಾಗೂ ಕ್ಲೀನರ್ ಹತ್ತಿರ ಸದರಿ ಸಾಗವಾನಿ ತುಂಡುಗಳಿಗೆ ಸಂಬಂಧಿಸಿದಂತೆ ಯಾವುದೇ ಪಾಸ್, ಪರ್ಮಿಟ್ ಅಥವಾ ಅಧಿಕೃತ ದಾಖಲೆಗಳೇನಾದರೂ ಇದೆಯೇ ಎಂದು ಕೇಳಿದಾಗ ಅಂತಹ ಯಾವುದೇ ದಾಖಲೆ, ಪಾಸ್ ಯಾ ಪರ್ಮಿಟ್ ಇಲ್ಲ ಎಂದು ಹೇಳಿಕೆ ನೀಡಿದ್ದಾರೆ. ಈ ಬಗ್ಗೆ ಎಫ್ಐಆರ್, ಪಂಚನಾಮೆ, ಸಾಕ್ಷಿದಾರರ ಹೇಳಿಕೆಗಳನ್ನು ಪರಿಶೀಲಿಸಲಾಗಿ ಸದರಿ ಸಾಗ ನಾಟುಗಳನ್ನು ಅನಧಿಕೃತವಾಗಿ ಕಳ್ಳ ಸಾಗಣೆ ಮಾಡುತ್ತಿದ್ದದ್ದು ದೃಢಪಡುತ್ತದೆ. ಯಾವುದೇ ಅರಣ್ಯ ಉತ್ಪನ್ನಗಳನ್ನು ಅಧಿಕೃತ ಪಾಸ್ ಪರ್ಮಿಟ್ ಅಥವಾ ಸಂಬಂಧಿಸಿದಂತೆ ಅಧಿಕೃತ ದಾಖಲೆಗಳಿಲ್ಲದೇ ಸಾಗಿಸುವುದು ಅಪರಾಧವಾಗುತ್ತದೆ. ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಲಾಗಿ ಸದರಿ ಪ್ರಕರಣದಲ್ಲಿ ಸರ್ಕಾರಿ ಸ್ವತ್ತಾದ ಸಾಗವಾನಿ ತುಂಡುಗಳನ್ನು ಪರವಾನಗಿ ಇಲ್ಲದೇ ಸಾಗಾಟ ಮಾಡಿದ ಬಗ್ಗೆ ಗುನ್ನೆ ಮಾಡಲಾಗಿದೆ ಎಂಬುದು ಸಾಬೀತಾಗಿದೆ.

**ಅಂಶ ನಂ. (ಅ)**

ಲಾರಿ ನಂ. ಕೆಎ-30-1191 ಇದರಲ್ಲಿ ದಿನಾಂಕ: 21.07.2003 ರಂದು ಮಧ್ಯಾಹ್ನ 2.00 ಗಂಟೆ ಹೊತ್ತಿಗೆ ಸುಳಗೇರಿ ಅರಣ್ಯ ಸ.ನಂ. 4ರ ಸುಳಗೇರಿ ರಸ್ತೆ ಬದಿಯಲ್ಲಿ ಅನಧಿಕೃತವಾಗಿ 16 ಸಾಗ ತುಂಡುಗಳನ್ನು ಕಳ್ಳ ಸಾಗಣೆ ಮಾಡುವಾಗ ಮುದ್ದೆ ಮಾಲು ಸಹಿತ ಹಿಡಿದಿದ್ದು, ಈ ಬಗ್ಗೆ ಎಫ್ಐಆರ್ ನಂ. 3/03-04 ದಿನಾಂಕ: 21.07.2003ರಲ್ಲಿ ನಮೂದಿಸಿದ್ದು ಇದೆ. (ಇಎಕ್ಸ್‌ಪಿ-2) ಹಾಗೂ ಈ ಬಗ್ಗೆ ಪಂಚನಾಮೆ ಜರುಗಿಸಿ ಅದರಲ್ಲಿ ಕೂಡ ಸದರಿ ಲಾರಿಯನ್ನು ಮೇಲಿನ ಗುನ್ನೆಯಲ್ಲಿ ಬಳಸಿದ ಬಗ್ಗೆ ದಾಖಲಾಗಿದೆ (ಇಎಕ್ಸ್‌ಪಿ-1). ವಲಯ ಅರಣ್ಯ ಅಧಿಕಾರಿ ಇವರು ಸಲ್ಲಿಸಿದ ಸೀಝುರ್ ರಿಪೋರ್ಟ್ (ಇಎಕ್ಸ್‌ಪಿ-3) ನಲ್ಲಿ ಕೂಡ ಸದರಿ ಲಾರಿಯನ್ನು ಮೇಲ್ಕಾಣಿಸಿದ ಗುನ್ನೆಯಲ್ಲಿ ಉಪಯೋಗಿಸಿದ್ದು ಕಂಡು ಬರುತ್ತದೆ. ಸದರಿ ಲಾರಿಯನ್ನು ಗುನ್ನೆಗಾಗಿ ಬಳಸಿದ ಬಗ್ಗೆ ಲಾರಿಯಲ್ಲಿ ಹೇರಲಾದ ಸಾಗವಾನಿ ನಾಟುಗಳೊಂದಿಗೆ ಲಾರಿಯ ಫೋಟೊ ತೆಗೆಯಲಾಗಿದ್ದು, (ಇಎಕ್ಸ್‌ಪಿ-4, ಇಎಕ್ಸ್‌ಪಿ-5, ಮತ್ತು ಇಎಕ್ಸ್‌ಪಿ-6), ಇವು ಕೂಡ ಸದರಿ ವಾಹನವು ಸಾಗವಾನಿ ನಾಟುಗಳ ಕಳ್ಳ ಸಾಗಣೆ ಅಪರಾಧದಲ್ಲಿ ಉಪಯೋಗಿಸಲ್ಪಟ್ಟಿದೆ ಎಂದು ಕಂಡು ಬರುತ್ತದೆ. ಇದೂ ಅಲ್ಲದೇ ಇದರೊಂದಿಗೆ ಸರ್ಕಾರದ ಸಾಕ್ಷಿಗಳು (ಪಿಡಬ್ಲ್ಯೂ-1), (ಪಿಡಬ್ಲ್ಯೂ-2), (ಪಿಡಬ್ಲ್ಯೂ-3), ಇವರೂ ವಾದ ವಿವಾದಗಳಲ್ಲಿ ತಮ್ಮ ಹೇಳಿಕೆಗಳನ್ನು ನೀಡಿ ಲಾರಿ ನಂ. ಕೆಎ-30-1191 ಇದು ಸಾಗವಾನಿ ನಾಟುಗಳ ಕಳ್ಳ ಸಾಗಾಣಿಕೆಯಲ್ಲಿ ಉಪಯೋಗಿಸಲ್ಪಟ್ಟಿದ್ದನ್ನು ಖಚಿತಪಡಿಸಿದ್ದಾರೆ.

ಅರ್ಜಿದಾರ ಹಾಗೂ ವಾಹನದ ಮಾಲೀಕರಾದ ಶ್ರೀ ದಿಗಂಬರ ವಾಮನ ಹಳದನಕರ (ಪಿಡಬ್ಲ್ಯೂ-1), ಇವರು ಸರ್ಕಾರದ ಎದುರು ವಿಚಾರಣೆಗೆ ಉತ್ತರಿಸುತ್ತಾ, ಸದರಿ ಲಾರಿಯನ್ನು ಸ್ವಂತ ಉಪಯೋಗದ ಹಾಗೂ ಬಾಡಿಗೆ ವ್ಯವಹಾರಕ್ಕೂ ಉಪಯೋಗಿಸುತ್ತಿದ್ದು, ಸದರಿ ಲಾರಿಯನ್ನು ಶ್ರೀ ರಾಮದಾಸ ಫುಂಡಲೀಕ ಕಲ್ಗುಟಕರ ಇವರಿಗೆ 2-3 ದಿವಸದ ಸಲುವಾಗಿ ಬಾಡಿಗೆಗೆ ನೀಡಿದ್ದು, ತಾನು ದಿನಾಂಕ: 21.07.2003 ರಂದು ಚಿಕಿತ್ಸೆಗಾಗಿ ಮಣಿಪಾಲ ಆಸ್ಪತ್ರೆಗೆ ಹೋಗಿದ್ದು ದಿನಾಂಕ: 23.7.2003 ರಂದು ಸಂಜೆ ಪರತ್ ಬಂದಿದ್ದಾಗಿ ಹೇಳುತ್ತಾ ತನ್ನ ವಾಹನವನ್ನು ಅರಣ್ಯ ಇಲಾಖೆಯವರು ಜಪ್ತಿ ಮಾಡಿದ್ದನ್ನು ತಾನು ದಿನಪತ್ರಿಕೆ ನೋಡಿ ತಿಳಿದುಕೊಂಡುದಾಗಿ ಹೇಳುತ್ತಾ ತಾನು ತನ್ನ ಲಾರಿಯನ್ನು ಅನಧಿಕೃತವಾಗಿ ವಸ್ತುಗಳನ್ನು ಸಾಗಾಟ ಮಾಡಲು ಯಾವ ಕಾಲಕ್ಕೂ ಉಪಯೋಗಿಸಿದ್ದು ಇರುವುದಿಲ್ಲ. ಯಾವುದೇ ಅನಧಿಕೃತ ವಸ್ತುಗಳನ್ನು ನನ್ನ ಲಾರಿಯಲ್ಲಿ ಸಾಗಾಟ ಮಾಡಬಾರದೆಂದು ನಾನು ನನ್ನ ಲಾರಿಯ ಚಾಲಕ ಹಾಗೂ ಕ್ಲೀನರಿಗೆ ನಿರ್ದೇಶನ ನೀಡಿದ್ದೆ. ಜಪ್ತಿ ಮಾಡಿದ ಮರಗಳ ತುಂಡುಗಳಿಗೂ ನನ್ನ ಲಾರಿಗೂ ಯಾವುದೇ ಸಂಬಂಧವಿಲ್ಲಾ ಎಂದು ಹೇಳಿಕೆ ನೀಡಿರುತ್ತಾರೆ. ಆದರೆ ಸದರಿಯವರ ಹೇಳಿಕೆಯನ್ನು ಪುಷ್ಟೀಕರಿಸಲು ಅವರು ಯಾವುದೇ ಅಧಿಕೃತ ದಾಖಲೆಗಳನ್ನು ಹಾಜರುಪಡಿಸಿದ್ದು ಇರುವುದಿಲ್ಲ.

ಈ ಮೇಲಿನ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿ, ಸದರಿ ಲಾರಿ ನಂ. ಕೆಎ-30-1191 ಇದನ್ನು ಪ್ರಸ್ತುತ ಪ್ರಕರಣದ ಸಾಗವಾನಿ ನಾಟುಗಳ ಕಳ್ಳಸಾಗಣೆ ಮಾಡುವಲ್ಲಿ ಉಪಯೋಗ ಮಾಡಿದ್ದು ಸಾಬೀತಾಗಿದೆ.

**ಅಂಶ ನಂ. (ಇ)**

ಪ್ರಸ್ತುತ ಪ್ರಕರಣದಲ್ಲಿ ಅರ್ಜಿದಾರರೇ ತಮ್ಮ (ಪಿ.ಡಬ್ಲ್ಯೂ-1) ಹೇಳಿಕೆಯಲ್ಲಿ ತಾನು ವಾಹನದ ಅಧಿಕೃತ ಮಾಲೀಕನಿದ್ದು, ಶ್ರೀ ಶಾಂತಾರಾಮ ಇವರು ಚಾಲಕರು ಹಾಗೂ ಶ್ರೀ ವಿಜಯ ಕೊಯರ ಇವರು ವಾಹನದ ಕ್ಲೀನರ್ ಆಗಿದ್ದಾರೆ ಅಂತಾ ಹೇಳಿದ್ದಾರೆ.

(ಪಿ.ಡಬ್ಲ್ಯೂ-1), (ಪಿ.ಡಬ್ಲ್ಯೂ-2), (ಪಿ.ಡಬ್ಲ್ಯೂ-3), ಇವರು ತಮ್ಮ ಹೇಳಿಕೆಗಳನ್ನು ನೀಡುತ್ತಾ ಸದರಿ ವಾಹನ ಸಂಖ್ಯೆ: ಕೆಎ-30-1191 ಇದರಲ್ಲಿ ಅನಧಿಕೃತವಾಗಿ ಸಾಗ ತುಂಡುಗಳನ್ನು (16-1.469 ಘಮೀ) ಸಾಗಿಸುತ್ತಿದ್ದಾಗ ಕಳ್ಳ ಸಾಗಾಣಿಕೆ ಮಾಡುತ್ತಿರುವ ಅರಣ್ಯ ಉತ್ಪನ್ನದೊಂದಿಗೆ ಹಿಡಿದು ಸೂಕ್ತ ದಾಖಲೆಗಳೊಂದಿಗೆ ಈ ನ್ಯಾಯಾಲಯದಲ್ಲಿ ಹಾಜರುಪಡಿಸಿದ್ದಾರೆ.

ಈ ಸಂಬಂಧವಾಗಿ ಸದರಿ ಲಾರಿಯಲ್ಲಿ ಸಾಗಣೆ ಮಾಡುತ್ತಿರುವ ಸಾಗವಾನಿ ತುಂಡುಗಳಿಗೆ ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದೇ ಅಧಿಕೃತ ದಾಖಲೆಗಳೇ ಇಲ್ಲವೆನ್ನುವುದನ್ನು ವಾಹನದ ಚಾಲಕ ಹಾಗೂ ಕ್ಲೀನರ್ ಇವರನ್ನು ವಿಚಾರಿಸಿ ಖಾತ್ರಿಪಡಿಸಿಕೊಂಡಿದ್ದಾರೆ. ಇದೂ ಅಲ್ಲದೇ ಸದರಿ ಲಾರಿಯಲ್ಲಿ ಕಳ್ಳ ಸಾಗಣಿಕೆ ಮಾಡಿದ ಬಗ್ಗೆ ಹಾಜರುಪಡಿಸಲಾದ ಫೋಟೋಗಳನ್ನು (ಇಎಕ್ಸ್‌ಪಿ-4, ಇಎಕ್ಸ್‌ಪಿ-5 ಹಾಗೂ

ಇಎಕ್ಸ್‌ಪಿ-6) ಪರಿಶೀಲಿಸಲಾಗಿ ಸದರಿ ವಾಹನ ಸಂಖ್ಯೆ: ಕೆಎ-30-1191 ಇದರಲ್ಲಿ ಅನಧಿಕೃತವಾಗಿ ಸಾಗವಾನಿ ನಾಟುಗಳನ್ನು ಕಳ್ಳ ಸಾಗರೆ ಮಾಡುತ್ತಿದ್ದದ್ದು ದೃಢಪಡುತ್ತದೆ.

ಆದರೆ ವಾಹನದ ಮಾಲೀಕರು ತಮ್ಮ ಹೇಳಿಕೆಯಲ್ಲಿ (ಪಿ.ಡಬ್ಲ್ಯೂ-1), ತಾನು ಸದರಿ ಲಾರಿಯನ್ನು ಶ್ರೀ ರಾಮದಾಸ ಪುಂಡಲೀಕ ಕಲ್ಗುಟಕರ ಇವರಿಗೆ 2-3 ದಿವಸದ ಸಲುವಾಗಿ ಬಾಡಿಗೆ ನೀಡಿದ್ದು, ಆನಂತರ ತಾನು ದಿನಾಂಕ: 21.7.2003 ರಂದು ಮಣಿಪಾಲ ಆಸ್ಪತ್ರೆಗೆ ಹೋಗಿ ದಿನಾಂಕ: 23.07.2003 ರಂದು ವಾಪಸ್ ಬಂದಿರುವುದಾಗಿ ಹೇಳುತ್ತಾರೆ. ಹಾಗೂ ತನ್ನ ಲಾರಿಯಲ್ಲಿ ಯಾವುದೇ ಅನಧಿಕೃತ ವಸ್ತುಗಳನ್ನು ಸಾಗಾಟ ಮಾಡಬಾರದೆಂಬ ನಿರ್ದೇಶನ ನೀಡಿದ್ದಾಗಿ ಹೇಳುತ್ತಾರೆ. ಈ ಹೇಳಿಕೆಯನ್ನು ಪರಿಶೀಲಿಸಲಾಗಿ ಅರ್ಜಿದಾರರು ತಾನು ಸದರಿ ಗುನ್ಹೆ ನಡೆದ ದಿನದಂದು ಮಣಿಪಾಲ ಆಸ್ಪತ್ರೆಗೆ ಹೋಗಿದ್ದರ ಬಗ್ಗೆ ಯಾವುದೇ ಅಧಿಕೃತ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ. ತನ್ನ ವಾಹನವನ್ನು ಅನಧಿಕೃತ ಕೆಲಸಗಳಿಗಾಗಿ ಉಪಯೋಗಿಸಬಾರದೆಂಬ ಬಗ್ಗೆ ತಾನು ವಾಹನದ ಚಾಲಕ ಹಾಗೂ ಕ್ಲೀನರುಗಳಿಗೆ ನಿರ್ದೇಶನ ನೀಡಿದ್ದೆ ಎನ್ನುವ ಬಗ್ಗೆಯೂ ಯಾವುದೇ ದಾಖಲೆಗಳನ್ನು ಈ ನ್ಯಾಯಾಲಯದ ಎದುರು ಹಾಜರುಪಡಿಸಿರುವುದಿಲ್ಲಾ.

ಪ್ರಸ್ತುತ ಪ್ರಕರಣದಲ್ಲಿ ಸಿಕ್ಕಿ ಹಾಕಿಕೊಂಡ ಲಾರಿ ನಂ. ಕೆಎ-30-1191ನ್ನು ಅರ್ಜಿದಾರರಿಗೆ ಮಧ್ಯಂತರ ತಾಬಾಕ್ಕೆ ಆದೇಶ ಮಾಡುವಾಗ ಮಾನ್ಯ ಜಿಲ್ಲಾ ಸೆಶನ್ ನ್ಯಾಯಾಲಯವು ಕ್ರಿಮಿನಲ್ ಅಪೀಲ್ ನಂ. 86/2003 ರಡಿಯಲ್ಲಿ ದಿನಾಂಕ: 6.10.2003 ರ ಆದೇಶದ ಪ್ಯಾರಾ ನಂ. 8 ರಲ್ಲಿ ವಿವರಿಸಿದಂತೆ.

> "The main ingradient of the provision for confiscation of the vehicle used for transportation of the forest produce is that, the illegal activities must be within the knowledge of the owner of the vehicle, the burden of proof of it is on the owner of the vehicle....................."

ಕರ್ನಾಟಕ ಅರಣ್ಯ ಕಾಯ್ದೆಯ ಅಧಿನಿಯಮ 71ಎ ಅಡಿಯಲ್ಲಿ ಅರಣ್ಯ ಅಪರಾಧದಲ್ಲಿ ಸಿಕ್ಕಿ ಹಾಕಿಕೊಂಡ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಬೇಕಾದಲ್ಲಿ ಈ ಗುನ್ಹೆಯನ್ನು ವಾಹನದ ಮಾಲೀಕ, ಅವನ ಏಜೆಂಟ್ ಅಥವಾ ಅದರ ಜವಾಬ್ದಾರಿಯನ್ನು ಹೊಂದಿದ ವ್ಯಕ್ತಿಗಳಿಗೆ ಗೊತ್ತಿದ್ದು ಮಾಡಲಾಗಿದೆ ಎಂಬುದು ದೃಢಪಡಬೇಕು. ಇದನ್ನು ದೃಢೀಕರಿಸುವ ಜವಾಬ್ದಾರಿ ವಾಹನದ ಮಾಲೀಕನ ಮೇಲಿರುತ್ತದೆ ಎಂಬ ಅಂಶವನ್ನು ಇಲ್ಲಿ ಗಮನಿಸಬೇಕಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ಇದಕ್ಕೆ ಸಂಬಂಧಪಟ್ಟ ಎಲ್ಲಾ ದಾಖಲೆಗಳು ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ವಾಹನದ ಮಾಲೀಕರು ಸದರಿ ಅರಣ್ಯ ಅಪರಾಧವು ತಮ್ಮ ಗಮನಕ್ಕೆ ಬರದೇ ಆಗಿದೆ ಎಂಬ ಅಂಶಗಳನ್ನು ದೃಢೀಕರಿಸುವಲ್ಲಿ ವಿಫಲರಾಗಿದ್ದಾರೆ. ಹೀಗಾಗಿ ಅವರು ಈ ಗುನ್ಹೆಯಲ್ಲಿ ಶಾಮೀಲಾಗಿದ್ದಾರೆಂದು ನ್ಯಾಯಾಲಯ ನಂಬುವುದು ಅನಿವಾರ್ಯವಾಗಿದೆ. ಅದೂ ಅಲ್ಲದೇ ಈ ಲಾರಿಯನ್ನು ಸಾಗವಾನಿ ನಾಟುಗಳ ಕಳ್ಳ ಸಾಗಾಣಿಕೆಗೆ ಬಳಕೆಯಾಗದಂತೆ ಲಾರಿಯ ಮಾಲೀಕರು ಅವರ ಏಜೆಂಟರು ಅಥವಾ ಈ ವಾಹನದ ಜವಾಬ್ದಾರಿಯನ್ನು ಹೊಂದಿದವರು ಸಾಕಷ್ಟು ಮುಂಜಾಗ್ರತಾ ಕ್ರಮಗಳನ್ನು ಕೈಕೊಳ್ಳಲು ವಿಫಲರಾಗಿದ್ದಾರೆ ಎನ್ನುವುದು ಈ ನ್ಯಾಯಾಲಯಕ್ಕೆ ಮನದಟ್ಟಾಗಿದೆ.

**ಅಂಶ ನಂ. (ಈ)**

ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ಅರ್ಜಿದಾರರ ಪರ ಸಾಕ್ಷಿಗಳು ದಾಖಲೆಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ ವಾಹನ ನಂ. ಕೆಎ-30-1191 ಇದು ದಿನಾಂಕ: 21.07.2003 ರಂದು ಎಫ್‌ಐಆರ್ ನಂ. 3/03-04 ದಿನಾಂಕ: 21.07.2003 ರನ್ವಯ ದಾಖಲಾದ ಗುನ್ಹೆಯಲ್ಲಿ ಅನಧಿಕೃತವಾಗಿ ಸಾಗವಾನಿ ನಾಟು (16-1.469ಘಮೀ). ಗಳನ್ನು ಕಳ್ಳ ಸಾಗಾಣಿಕೆ ಮಾಡುತ್ತಿದ್ದುದು ದೃಢಪಟ್ಟಿರುವುದರಿಂದ ಕರ್ನಾಟಕ ಅರಣ್ಯ ಕಾಯ್ದೆ 71ಎ ದರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕು ಅನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಜಿ. ವಿ. ರಂಗರಾವ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವುದೇನೆಂದರೆ, ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಅರಣ್ಯ ಕಾಯ್ದೆ 1963ರ ಅನುಚ್ಛೇದ 71 (ಎ) (ಈ ತಾರೀಖಿನವರೆಗೆ ಆದ ತಿದ್ದುಪಡಿ) ಪ್ರಕಾರ ವಾಹನ ನಂ. ಕೆಎ-30-1191 ಲಾರಿಯನ್ನು ಮತ್ತು ಅದರಲ್ಲಿದ್ದ 16 (ಹದಿನಾರು) ಸಾಗವಾನಿ ತುಂಡುಗಳ (1.469 ಘ.ಮೀ)ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | ಕೆಎ-30-1191 |
| 2) | ಇಂಜಿನ್ ಸಂಖ್ಯೆ | : | 692-ಡಿ 1590089 |
| 3) | ಚಾರ್ಸಿ ಸಂಖ್ಯೆ | : | 364-073-5-80611 |
| 4) | ವಾಹನದ ಮಾದರಿ | : | ಟಾಟಾ ಲಾರಿ |

ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 02.08.2004 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಜಿ. ವಿ. ರಂಗರಾವ್, ಭಾ.ಅ.ಸೇ.,**

ಪಿ.ಆರ್.1195 ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**
**ಮರಣಪ್ರಕರಣ ಸಂಖ್ಯೆ: ಕಾಅಕೋ:ಕಾನಪ:ಎಸ್‌ಆರ್-91:2004 ದಿನಾಂಕ: 1ನೇ ಜುಲೈ 2004**
**ಪ್ರಕಟಣೆ**

**ಅರ್ಜಿದಾರರು** ವಿರುದ್ಧ **ಪ್ರತಿವಾದಿ**

1. ಸಿದ್ದಪ್ಪಾ ಸಿದ್ರಾಮಪ್ಪಾ ದಳವಾಯಿ, **ವಾಸ:** ಶೇಗುಣಸಿ ತಾ: ಬಿಜಾಪುರ ಇತರೆ ಒಬ್ಬರು.

1. ಶಿವಪ್ಪಾ ಉರ್ಫ್ ಶಿವನಗೌಡ ಶೇಬಗೌಡ ಬಿರಾದಾರ, ಪೊಲೀಸ್ ಹೆಡ್ ಕಾನ್‌ಸ್ಟೇಬಲ್, ಎ.ಪಿ.ಎಂ.ಸಿ. ಪೊಲೀಸ್ ಸ್ಟೇಶನ್, ಬಿಜಾಪೂರ.

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಮೃತ ಲಕ್ಕಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 11.11.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಸಿದ್ದಪ್ಪಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**
ಪಿ.ಆರ್.1147 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**
**ಮರಣಪ್ರಕರಣ ಸಂಖ್ಯೆ: ಕಾಅಕೋ:ಕಾನಪ:87:2004 ದಿನಾಂಕ: 21ನೇ ಜೂನ್ 2004**
**ಪ್ರಕಟಣೆ**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಮಲ್ಲಪ್ಪಾ ಅಯ್ಯಪ್ಪಾ ಬೀಳಗಿ **ವಾಸ:** ಮುತ್ತಲದಿನ್ನಿ ತಾ: ಬೀಳಗಿ ಜಿಲ್ಲೆ: ಬಾಗಲಕೋಟ ಇತರೆ ಒಬ್ಬರು (ಬಿಜಾಪುರ)

1. ತಮ್ಮಣ್ಣಾ ರಾಮಪ್ಪಾ ಮಲ್ಲಾಪೂರ, **ವಾಸ:** ಗಾಂಧಿನಗರ, ಬೀಳಗಿ ತಾ: ಬೀಳಗಿ ಜಿಲ್ಲೆ; ಬಾಗಲಕೋಟೆ.
2. ದಿ-ಬ್ರ್ಯಾಂಚ್ ಮ್ಯಾನೇಜರ್, ನ್ಯೂ ಇಂಡಿಯಾ ಅಸ್ಸೂರೆನ್ಸ್ ಕಂ. ಲಿ., ತುಪ್ಪದ ಬಂಗ್ಲೆ, ಗಾಂಧಿ ಸರ್ಕಲ್ ಹತ್ತಿರ, ಗದಗ್ (ಹಳಮಶೆಟ್ಟಿ ಬಿಲ್ಡಿಂಗ್, ಬಿಜಾಪುರ).

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಮೃತ ವಿಠ್ಠಲ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 30.05.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಮಲ್ಲಪ್ಪಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**
ಪಿ.ಆರ್.1148 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ,**
**ಕಾರವಾರ ಇವರ ನ್ಯಾಯಾಲಯ**
**ಸಂ.ಎ4:ಎಫ್‌ಒಸಿ:ವಿವ-68: 1996-97 ದಿನಾಂಕ: 10ನೇ ಆಗಸ್ಟ್ 2004**

**ಉಪಸ್ಥಿತರು :** ಶ್ರೀ ಜಿ. ವಿ. ರಂಗರಾವ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**ಫಿರ್ಯಾದುದಾರರು :** ವಿರುದ್ಧ **ಅರ್ಜಿದಾರ :**

1. ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ

1. ಶ್ರೀ ಯಶವಂತ ರಾಮ ಶ್ಯಾನಭಾಗ ಮುಕ್ಕಾಂ: ಅಜ್ಜಿಕಟ್ಟಾ ಪೋಸ್ಟ್: ಅಜ್ಜಿಕಟ್ಟಾ ತಾಲ್ಲೂಕು: ಅಂಕೋಲಾ ಜಿಲ್ಲೆ: ಉತ್ತರ ಕನ್ನಡ

**ಪ್ರಕರಣದ ಹಿನ್ನೆಲೆ:**

ಮಾಸ್ತಿಕಟ್ಟಾ ವಲಯ ಅರಣ್ಯಾಧಿಕಾರಿ ಹಾಗೂ ಇವರ ಸಿಬ್ಬಂದಿಯವರಿಗೆ ದಿನಾಂಕ: 23.7.1996 ರಂದು ಬಂದ ಖಚಿತ ಬಾತ್ಮಿ ಪ್ರಕಾರ ಅಂಕೋಲಾ ತಾಲೂಕಿನ ಮಾಸ್ತಿಕಟ್ಟಾ ವಲಯದ ವ್ಯಾಪ್ತಿಯಲ್ಲಿಯ ಹೆಬ್ಬುಳ ಗ್ರಾಮದ ಅರಣ್ಯ ಸ.ನಂ. 72ನೇದರಲ್ಲಿ ಕಾಡುಗಳ್ಳರು ಅನಧಿಕೃತವಾಗಿ ಸಾಗವಾನಿ ಮರಗಳನ್ನು ಕಡಿದು ಮಾಲು ತಯಾರಿಸಿ, ಅಡಗಿಸಿ ಇಟ್ಟಿದ್ದು, ಸದರಿ ಮಾಲನ್ನು ಕಾಡುಗಳ್ಳರು ಟ್ರಕ್ಕಿನ ಮೇಲೆ ತುಂಬಿ ಸಾಗಿಸುವ ಬಗ್ಗೆ ಭಾತ್ಮಿ ಬಂದಿತ್ತು. ಅದರಂತೆ ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ತಮ್ಮ ಸಿಬ್ಬಂದಿ ಜನರನ್ನು ಹಾಗೂ ಸ್ಥಳೀಯ ಪಂಚ ಜನರೊಂದಿಗೆ ಮಾಹಿತಿ ಬಂದಿರುವ ಸ್ಥಳಕ್ಕೆ ಹೋಗಿ ಗಿಡಗಳ ಮರೆಯಲ್ಲಿ ಅಡಗಿ ಕುಳಿತು ಕಾಯುತ್ತಿರುವಾಗ ನಿರೀಕ್ಷೆಯಂತೆ ಸ್ವಲ್ಪ ಅಂತರದಲ್ಲಿಯೇ ಟ್ರಕ್ ನಂ. ಎಂ.ಇ.ಜೆಡ್-7632 ಬಂದು ನಿಂತು ಅದರಿಂದ ಕಾಡುಗಳ್ಳರು ಇಳಿದು ಸಮೀಪದಲ್ಲಿಯೇ ಕಡಿದು ತಯಾರಿಸಿ ಇಟ್ಟಿರುವ ಸಾಗವಾನಿ ನಾಟುಗಳನ್ನು ಟ್ರಕ್ ನಂ. ಎಂ.ಇ.ಜೆಡ್-7632 ನೇದರಲ್ಲಿ ತುಂಬುತ್ತಿರುವಾಗ ಅರಣ್ಯ ಸಿಬ್ಬಂದಿ ಜನರು ಹಾಗೂ ಪಂಚ ಜನರು ಕೂಡಿಕೊಂಡು ಟ್ರಕ್ ಚಾಲಕನಾದ ಶ್ರೀ ಮುರಳೀಧರ ದೇವಿದಾಸ ನಾಯಕ ಸಾ: ಅಗಸೂರ (ಉಳ್ಳಾಗಡ್ಡಿ) ಹಾಗೂ ವಿಷ್ಣು ಸಣ್ಣಕೂಸ ಗೌಡಾ ಸಾ:ಮೂಲಕೇರಿ ತಾ: ಕುಮಟಾ ಇವರುಗಳನ್ನು ಬಂಧಿಸಿ, ಟ್ರಕ್ಕಿನಲ್ಲಿ ತುಂಬಿದ ಸಾಗವಾನಿ ನಾಟುಗಳಿಗೆ ಸರ್ಕಾರಿ ಪಾಸ್ ವ ಪರ್ಮಿಟ್ ಇದೆಯೇ ಎಂಬ ಬಗ್ಗೆ ವಿಚಾರಿಸಿ ಪರಿಶೀಲಿಸಲಾಗಿ, ಅವರ ಹತ್ತಿರ ಯಾವುದೇ ಸರ್ಕಾರದ ಪರ್ಮಿಟ್, ಪಾಸು ಅಥವಾ ಅಧಿಕೃತ ದಾಖಲೆಗಳು ಇಲ್ಲವೆಂದು ಕಂಡುಬಂದಿತು. ಹಾಗೂ ಪರಾರಿಯಾದ ಇನ್ನುಳಿದ ಆರೋಪಿಗಳ ಹೆಸರನ್ನು ವಿಚಾರಿಸಲಾಗಿ ಒಬ್ಬ ಅಪರಾಧಿ ಶ್ರೀ ಫರಾಸಿಕ ಸಾಲ್ವೊಧರ ಫರ್ನಾಂಡಿಸ್ ಸಾ: ಸುಂಕಸಾಳ ಅಂತಾ ತಿಳಿದು ಬಂದಿದ್ದು, ಉಳಿದವರ ಹೆಸರು ತಿಳಿಯಲಿಲ್ಲ. ನಂತರ ಪಂಚ ಜನರ ಸಮಕ್ಷಮ ಗಾಡಿಯಲ್ಲಿ ಹೇರಲಾದ ಮಾಲನ್ನು ಪರಿಶೀಲಿಸಲಾಗಿ ಅವುಗಳಿಗೆ ಯಾವುದೇ ಸರ್ಕಾರಿ ಛಪ್ಪಾ, ಮುದ್ರೆ ವಗೈರೆ ಇದ್ದದ್ದು ಕಂಡು ಬರಲಿಲ್ಲ. ಆದ್ದರಿಂದ ಸದರಿ ಮಾಲು ಅನಧಿಕೃತವಾಗಿ ಕಳ್ಳತನದಿಂದ ಕಡಿದ ಮಾಲು ಎಂದು ಖಚಿತಪಡಿಸಿಕೊಂಡು ಸದರಿ ಟ್ರಕ್ ಹಾಗೂ ಅರಣ್ಯ ಉತ್ಪನ್ನವಾದ ಸಾಗ ನಾಟಾಗಳನ್ನು ಜಪ್ತಿ ಮಾಡಿ ಪಂಚ ಜನರ ಎದುರಿನಲ್ಲಿ ಅವುಗಳನ್ನು ಪಂಚನಾಮೆಯೊಂದಿಗೆ ಅಳತೆ ಮಾಡಲಾಗಿ ಅವು ಅಂತೂ ನಗ 23ಕ್ಕೆ 1.429 ಕ್ಯೂ.ಮಿ. ಇದ್ದು, ಅದಕ್ಕೆ ಕಾನೂನು ರೀತಿ ನಿಶಾನೆ ಮಾಡಿ ಬಣ್ಣದಿಂದ ಕ್ರಮ ಸಂಖ್ಯೆ ಬರೆದು ಟ್ರಕ್ಕನ್ನು ಮಾಲು ಸಮೇತ ಸಂರಕ್ಷಣೆಯ ಸಲುವಾಗಿ ಅಂಕೋಲಾ ವಲಯ ಕಛೇರಿಗೆ ಒಯ್ಯಲಾಯಿತು. ಪಂಚರ ಅಭಿಪ್ರಾಯದಂತೆ ಸದರಿ ಮಾಲಿನ ಕಿಮ್ಮತ್ತು ಸುಮಾರು ರೂ. 25000.00 ಹಾಗೂ ಗಾಡಿ ಕಿಮ್ಮತ್ತು ಒಂದು ಲಕ್ಷ ಆಗಬಹುದೆಂದು ಅಂದಾಜಿಸಲಾಯಿತು.

ಸದರಿ ಅರಣ್ಯ ಅಪರಾಧದಲ್ಲಿ ಜಪ್ತಿ ಮಾಡಲಾದ ವಾಹನ ಟ್ರಕ್ ನಂ. ಎಂ.ಇ.ಜೆಡ್-7632 ಇದರ ಮಾಲೀಕರ ವಿಳಾಸಕ್ಕಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರೊಂದಿಗೆ ಪತ್ರ ವ್ಯವಹಾರ ಮಾಡಲಾಗಿ, ಸದರಿ ವಾಹನದ ಮಾಲೀಕರ ವಿಳಾಸಕ್ಕಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಧಾರವಾಡ ಇವರನ್ನು ಸಂಪರ್ಕಿಸಲು ತಿಳಿಸಿದಂತೆ, ಪ್ರಾದೇಶಿಕ ಸಾರಿಗೆ ಅಧಿಕಾರಿ, ಧಾರವಾಡ ಇವರೊಂದಿಗೆ ಪತ್ರ ವ್ಯವಹಾರ ನಡೆಸಿ, ಸದರಿ ಟ್ರಕ್ ನಂ. ಎಂ.ಇ.ಜೆಡ್-7632 ನೇದ್ದರ ಮಾಲೀಕರ ವಿಳಾಸ ಪಡೆದುಕೊಂಡು ವಾಹನದ ಮಾಲೀಕ ಶ್ರೀ ಯಶವಂತ ರಾಮ ಶ್ಯಾನಭಾಗ ಸಾ: ಅಜ್ಜಿಕಟ್ಟಾ, ತಾ: ಅಂಕೋಲಾ (ಉ.ಕ) ಇವರಿಗೆ ಈ ನ್ಯಾಯಾಲಯದಿಂದ ದಿನಾಂಕ: 12.3.1999 ರಂದು ನೋಂದಾಯಿತ ಅಂಚೆ ಮೂಲಕ ಕಾರಣ ಕೇಳುವ ನೋಟೀಸು ಜಾರಿ ಮಾಡಿ, ಲಾರಿ ನಂ. ಎಂ.ಇ.ಜೆಡ್-7632 ನೇದರಲ್ಲಿ ದಿನಾಂಕ: 23.7.1996 ರಂದು ಅನಧಿಕೃತವಾಗಿ, ಹೆಬ್ಬುಳ ಅರಣ್ಯ ಸ.ನಂ. 72 ನೇದ್ದರಲ್ಲಿಂದ 23 ಸಂಖ್ಯೆ ಸಾಗವಾನಿ ತುಂಡುಗಳು 1.429 ಘ.ಮೀ. ಕಳುವು ಮಾಡುವ ಉದ್ದೇಶದಿಂದ ತುಂಬಿದ ಸದರಿ ಲಾರಿಯನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂಬ ಬಗ್ಗೆ ಸೂಕ್ತ ಸಮಜಾಯಿಷಿ ನೀಡಲು ಕೇಳಿಕೊಳ್ಳಲಾಗಿತ್ತು.

ಸದರಿ ನೋಟಿಸಿಗೆ ಆಪಾದಿತ ಶ್ರೀ ಯಶವಂತ ರಾಮ ಶ್ಯಾನಭಾಗ ಇವರು ದಿನಾಂಕ: 25.3.1999 ರಂದು ಪ್ರತಿಕ್ರಿಯಿಸುತ್ತಾ ತಾವು ಟ್ರಕ್ ನಂ. ಎಂ.ಇ.ಜೆಡ್-7632 ಇದರ ಮಾಲೀಕರಿದ್ದದ್ದು ನಿಜವಿದ್ದು, ಸದರಿ ಟ್ರಕ್‌ನ್ನು ಶ್ರೀ ಸಣ್ಣಕೂಸ ಬಲೀಂದ್ರ ಗೌಡಾ ಸಾ: ಮಾದನಗೇರಿ, ತಾ: ಅಂಕೋಲಾ ಇವರಿಗೆ ತಿಂಗಳಿಗೆ ರೂ. 4000.00 ಗಳ ಬಾಡಿಗೆ ಗೊತ್ತುಪಡಿಸಿ ಅವರ ತಾಬಾಕ್ಕೆ ಬೇರೆ ಕೆಲಸಕ್ಕೆ ಬಾಡಿಗೆ ಮೇಲೆ ನೀಡಿದ್ದು ವಾಹನ ಚಾಲಕನು ಕೂಡಾ ಅವರ ಕಡೆಯವನೇ ಆಗಿದ್ದು, ಈ ವಾಹನವನ್ನು ಅರಣ್ಯ ಅಪರಾಧದಲ್ಲಿ ಬಳಸಿದ್ದು ತನಗೆ ತಿಳಿದಿರುವುದಿಲ್ಲ ಹಾಗೂ ಮಾಲೀಕನು ಅಂದರೆ ತಾನು ಯಾವುದೇ ರೀತಿಯಲ್ಲಿ ಅರಣ್ಯ ಅಪರಾಧದಲ್ಲಿ ಭಾಗಿಯಾಗಿರುವುದಿಲ್ಲ. ಹೀಗಾಗಿ ತನ್ನಿಂದ ವಾಹನ ಬಾಡಿಗೆ ತೆಗೆದುಕೊಂಡಾತನಿಂದಾಗಲೀ ಅಥವಾ ವಾಹನ ಚಾಲಕನಿಂದಾಗಲಿ ನಡೆದ ಅಪರಾಧಗಳಿಗೆ ತಾನು ಹೊಣೆಗಾರನಾಗುವುದಿಲ್ಲ ಆದ್ದರಿಂದ ತನ್ನ ಲಾರಿ ನಂ. ಎಂ.ಇ.ಜೆಡ್-7632ನ್ನು ಈ ಅರಣ್ಯ ಅಪರಾಧ ಪ್ರಕರಣದಲ್ಲಿ ಮುಟ್ಟುಗೋಲು ಹಾಕಿಕೊಳ್ಳದೇ ಬಿಟ್ಟುಕೊಡಬೇಕಾಗಿ ಕೇಳಿಕೊಂಡಿದ್ದಾರೆ. ಅಲ್ಲದೇ ಸದರಿ ವಾಹನವು ಹಳೆಯ ವಾಹನವಾಗಿದ್ದು, ಅದರ ಅಜಮಾಸ ಕಿಮ್ಮತ್ತು ರೂ. 80000.00 ಆಗುತ್ತಿದ್ದು, ನ್ಯಾಯಾಲಯವು ಆದೇಶಿಸಿದ ಭದ್ರತಾ ಠೇವಣಿಯನ್ನು ಸಹ ಇಡಲು ತಯಾರು ಇರುವುದಾಗಿ ಕೇಳಿಕೊಂಡಿದ್ದಾರೆ.

ನಂತರ ಪ್ರಸಕ್ತ ಕೇಸಿನ ವಿಚಾರಣೆಯನ್ನು ದಿನಾಂಕ: 28.4.1999 ರಂದು ಪ್ರಾರಂಭಿಸಿ ವಿಚಾರಣೆಯನ್ನು ದಿನಾಂಕ: 06.04.2002 ರಂದು ಮುಗಿಸಲಾಯಿತು.

**ಅಭಿಯೋಜಕರ ಪರವಾಗಿ ಸಾಕ್ಷಿಗಳು:**

1. ಶ್ರೀ ಆನಂದು ತಂದೆ ನಾರಾಯಣ ಪಡ್ತಿ (ಪಿ.ಡಬ್ಲ್ಯೂ-1) ಪಂಚರು.
2. ಶ್ರೀ ಪಾಂಡು ಪೊಕ್ಕಾ ಗುನಗಿ, ವನಪಾಲಕ (ಪಿ.ಡಬ್ಲ್ಯೂ-2)
3. ಶ್ರೀ ಕುಸ್ಲಪ್ಪ ಲಕ್ಷ್ಮಣ ನಾಯ್ಕ, ಅರಣ್ಯ ರಕ್ಷಕ, ಹೆಬ್ಬುಳ, (ಪಿ.ಡಬ್ಲ್ಯೂ-3)
4. ಶ್ರೀ ಸುಧಾಕರ ಗಂಗಾಧರ ಗುನಗಾ, ವನಪಾಲಕ ಅಗಸೂರ (ಪಿ.ಡಬ್ಲ್ಯೂ-4)

**ಪ್ರತಿವಾದಿಗಳ ಪರವಾಗಿ:**

1. ಶ್ರೀ ಯಶವಂತ ರಾಮ ಶ್ಯಾನಭಾಗ, ವಾಹನದ ಮಾಲೀಕ, ಅರ್ಜಿದಾರ (ಡಿ.ಡಬ್ಲ್ಯೂ-3)

ಮೇಲ್ಕಂಡ ಸಾಕ್ಷಿದಾರರ ಹೇಳಿಕೆ ಮತ್ತು ಪಾಟಿ ಸವಾಲುಗಳಿಗೆ ಉತ್ತರಗಳನ್ನು ದಾಖಲು ಮಾಡಿಕೊಳ್ಳಲಾಯಿತು.

ವಾದಿ ಹಾಗೂ ಪ್ರತಿವಾದಿಗಳ ಹೇಳಿಕೆಗಳನ್ನು ಅವಲೋಕಿಸಿದ ನಂತರ ಪ್ರಕರಣಕ್ಕೆ ಸಂಬಂಧಿಸಿದಂತೆ ಅರ್ಜಿದಾರರ ವಕೀಲರ ಮತ್ತು ಸರ್ಕಾರದ ಪರ ವಕೀಲರ ಲಿಖಿತ ವಾದ ವಿವಾದಗಳನ್ನು ಆಲಿಸಿದ ನಂತರ ಹಾಗೂ ಹಾಜರುಪಡಿಸಿದ ದಾಖಲೆಗಳನ್ನು ಅವಲೋಕಿಸಿದಾಗ ಈ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಸದರಿ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗವಾನಿ ನಾಟುಗಳನ್ನು ಕಳ್ಳ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ಗುನ್ಹೆ ಆಗಿದೆಯೇ?

ಬ) ಮೇಲೆ ನಮೂದಿಸಿದ ಪ್ರಕರಣದಲ್ಲಿ ಸಾಗವಾನಿ ನಾಟುಗಳ ಕಳ್ಳ ಸಾಗಾಣಿಕೆ ಮಾಡುವಲ್ಲಿ ಲಾರಿ ನಂ. ಎಂ.ಇ.ಜೆಡ್-7632 ಎಂಬ ಲಾರಿಯನ್ನು ಉಪಯೋಗ ಮಾಡಲಾಗಿದೆಯೇ?

ಕ) ಈ ಗುನ್ಹೆಯನ್ನು ವಾಹನದ ಮಾಲೀಕ ಅಥವಾ ಅದರ ಜವಾಬ್ದಾರಿ ಹೊಂದಿದ ವ್ಯಕ್ತಿಗಳಿಗೆ ಗೊತ್ತಿದ್ದು ಮಾಡಲಾಗಿದೆಯೇ? ಹಾಗೂ ಅವರು ಈ ಗುನ್ಹೆಯಲ್ಲಿ ಶಾಮೀಲಾಗಿದ್ದಾರೆಯೇ? ಹಾಗೂ ಈ ಲಾರಿಯನ್ನು ಸಾಗವಾನಿ ನಾಟುಗಳ ಕಳ್ಳ ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಅಥವಾ ಈ ವಾಹನದ ಜವಾಬ್ದಾರಿಯನ್ನು ಹೊಂದಿದವರು ಸಾಕಷ್ಟು ಮುಂಜಾಗ್ರತಾ ಕ್ರಮವನ್ನು ಕೈಗೊಳ್ಳಲು ವಿಫಲರಾಗಿದ್ದಾರೆಯೇ?

(ಡ) ಈ ವಾಹನವನ್ನು ಅರಣ್ಯ ಕಾಯ್ದೆ 71-ಎ ಅಧಿನಿಯಮದಡಿಯಲ್ಲಿ ಮುಟ್ಟುಗೋಲು ಹಾಕಬಹುದೇ?

ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.

ಅಂಶ ನಂ. (ಅ) - ಹೌದು

ಅಂಶ ನಂ. (ಬ) - ಹೌದು

ಅಂಶ ನಂ. (ಕ) - ಹೌದು

ಅಂಶ ನಂ. (ಡ) - ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸಿದೆ.

(ಅ) ಪ್ರಸ್ತುತ ಪ್ರಕರಣದಲ್ಲಿ ಅಂಕೋಲಾ ತಾಲ್ಲೂಕು ಹೆಬ್ಬುಳ ಅರಣ್ಯ ಸ.ನಂ. 72 ನೇದರಲ್ಲಿಂದ 23 ಸಾಗವಾನಿ ನಗಗಳನ್ನು ಟ್ರಕ್ ನಂ. ಎಂ.ಇ.ಜೆಡ್-7632 ನೇದ್ದರಲ್ಲಿ ಅನಧಿಕೃತವಾಗಿ ತುಂಬುತ್ತಿರುವಾಗ ಅಟಕಾಯಿಸಿದ್ದು ಇದೆ. ಸದರಿ ಸಾಗವಾನಿ ನಾಟುಗಳನ್ನು ಅವುಗಳನ್ನು ಕಡಿದು ತಯಾರಿಸಿದ ಸ್ಥಳದಲ್ಲಿ ದೊರೆತ ಬುಡಚಿಗಳೊಂದಿಗೆ ಹೊಂದಾಣಿಕೆ ಮಾಡಿ ನೋಡಲಾಗಿ, ಕಡಿದು ತಯಾರಿಸಿ ಟ್ರಕ್ಕಿನಲ್ಲಿ ಹೇರಿದ ನಾಟಾಗಳ ಘೇರಿ ಹಾಗೂ ಅನಧಿಕೃತವಾಗಿ ಕಡಿದು ಸಾಗಾಣಿಕೆ ಮಾಡಿದ ನಾಟಾಗಳ ಬುಡಚಿ ಸರಿ ಹೊಂದುತ್ತಿರುವ ಬಗ್ಗೆ ಹಾಗೂ ಈ ಅರಣ್ಯ ಉತ್ಪನ್ನ (ಸಾಗವಾನಿ ನಾಟುಗಳು) ವನ್ನು ಯಾವುದೇ ಪಾಸ್ ಯಾ ಪರ್ಮಿಟ್ ಇಲ್ಲದೇ ಕಡಿದು ಟ್ರಕ್ಕಿನಲ್ಲಿ ಹೇರುತ್ತಿರುವ ಬಗ್ಗೆ ಪ್ರಥಮ ಮಾಹಿತಿ ವರದಿ, ವಿಚಾರಣಾ ವರದಿ, ಪಂಚನಾಮೆ ಹಾಗೂ ಇತರೇ ದಾಖಲೆಗಳನ್ನು ಪರಿಶೀಲಿಸಲಾಗಿ ದೃಢಪಟ್ಟಿದೆ. ಯಾವುದೇ ಅರಣ್ಯ ಉತ್ಪನ್ನ ಕಟಾವಣೆ, ಸಾಗಾಣಿಕೆ ಮಾಡಬೇಕಾದಲ್ಲಿ ಸೂಕ್ತ ಪ್ರಾಧಿಕಾರದ ಅನುಮತಿ, ಪಾಸ್ ಯಾ ಪರ್ಮಿಟ್ ಹೊಂದಿರುವುದು ಆವಶ್ಯವಿರುತ್ತದೆ. ಆದರೆ ಪ್ರಸ್ತುತ ಪ್ರಕರಣದಲ್ಲಿ ಆಪಾದಿತರು ತಮ್ಮೊಂದಿಗೆ ಯಾವುದೇ ಅಧಿಕೃತ ಪಾಸ್ ಯಾ ಪರ್ಮಿಟ್ ಹೊಂದದೇ ಅರಣ್ಯ ಉತ್ಪನ್ನಗಳಾದ ಸಾಗವಾನಿ ನಾಟುಗಳನ್ನು ಅನಧಿಕೃತವಾಗಿ ಕಡಿದು ಟ್ರಕ್ಕಿನಲ್ಲಿ ಕಳ್ಳ ಸಾಗಾಣಿಕೆಗಾಗಿ ಹೇರುತ್ತಿರುವುದು ದೃಢಪಟ್ಟಿರುವುದರಿಂದ ಸದರಿ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗವಾನಿ ನಾಟಾಗಳನ್ನು ಕಳ್ಳ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ಗುನ್ಹೆ ಆಗಿದೆ.

ಬ) ಅರಣ್ಯ ಸಿಬ್ಬಂದಿ ಜನರು ಪಂಚ ಜನರೊಂದಿಗೆ ಕೂಡಿಕೊಂಡು ಮಾಹಿತಿ ನೀಡಿದ ಸ್ಥಳದಲ್ಲಿ ಕಾಯುತ್ತಾ ಇರುವಾಗ ರಾತ್ರಿ ಲಾರಿ ನಂ. ಎಂ.ಇ.ಜೆಡ್-7632 ಇದು ಬಂದು ಅದರಿಂದ ಕಳ್ಳ ಸಾಗಾಣಿಕೆದಾರರು ಹಾಗೂ ವಾಹನ ಚಾಲಕ ಇವರು ಇಳಿದು ಈಗಾಗಲೇ ಅನಧಿಕೃತವಾಗಿ ಕಡಿದು ತಯಾರಿಸಿದ ನಾಟುಗಳನ್ನು ಲಾರಿಯಲ್ಲಿ ಹೇರುತ್ತಿದ್ದಾಗ ಅಟಕಾಯಿಸಿದ್ದು, ಈ ಬಗ್ಗೆ ಪಂಚನಾಮೆ (ಪಿ-1)ಯಲ್ಲಿ ನಮೂದಿಸಿದಂತೆ ಹಾಜರಿದ್ದ ಸಿಬ್ಬಂದಿ ಜನ ಹಾಗೂ ಪಂಚರೆದುರಿಗೆ ಪಂಚನಾಮೆ ಮಾಡಿದ್ದು ಇದ್ದು, ಸದರಿ ಅನಧಿಕೃತ ಕಡಿದು ತಯಾರಿಸಿದ ಸಾಗವಾನಿ ನಾಟುಗಳನ್ನು (23 ನಗ) ಹೇರುತ್ತಿದ್ದ ಲಾರಿ ನಂಬರನ್ನು ಪರಿಶೀಲಿಸಲಾಗಿ ಅದು ಎಂ.ಇ.ಜೆಡ್-7632 ಅಂತಾ ಇದ್ದುದನ್ನು ಖಾತ್ರಿಪಡಿಸಿಕೊಳ್ಳಲಾಗಿದೆ.

ಈ ಬಗ್ಗೆ ಪ್ರಥಮ ಮಾಹಿತಿ ವರದಿ ನಂ. 8/95-96 (ಪಿ-3) ನಲ್ಲಿ ಕೂಡ ಅಪರಾಧದಲ್ಲಿ ತೊಡಗಿದ್ದ ವಾಹನ ಸಂಖ್ಯೆ: ಎಂ.ಇ.ಜೆಡ್-7632 ಅಂತಾ ದಾಖಲಿಸಲಾಗಿದೆ. ಅಲ್ಲದೇ ವಿಚಾರಣಾ ವರದಿಯಲ್ಲಿ ಕೂಡ (ಡಿ-1) ಅಪರಾಧದಲ್ಲಿ ಉಪಯೋಗಿಸಿದ ಟ್ರಕ್ ನಂ. ಎಂ.ಇ.ಜೆಡ್-7632 ಅಂತಾ ನಮೂದಿಸಲಾಗಿದೆ.

ಇದೂ ಅಲ್ಲದೇ ಶ್ರೀ ವಿಷ್ಣು ಸಣ್ಣಕೂಸ ಗೌಡ ಸಾ: ಮೂಲಕೇರಿ, ತಾ: ಕುಮಟಾ ಪಿ.ಡಬ್ಲ್ಯೂಡಿ ಗುತ್ತಿಗೆದಾರ ಇವರು ದಿನಾಂಕ: 23.07.1996 ರಂದು ವಲಯ ಅರಣ್ಯಾಧಿಕಾರಿಗಳ ಎದುರು ನೀಡಿದ ಲಿಖಿತ ಹೇಳಿಕೆಯಲ್ಲಿ ಕೂಡ ಈ ಅಪರಾಧದಲ್ಲಿ ಉಪಯೋಗಿಸಲಾದ ವಾಹನ ಎಂ.ಇ.ಜೆಡ್-7632 ಅನ್ನುವುದು ದೃಢಪಡಿಸುತ್ತದೆ. ಅದೇ ರೀತಿ ವಾಹನದ ಚಾಲಕ ಶ್ರೀ ಮುರಳೀಧರ ದೇವಿದಾಸ ನಾಯ್ಕ, ಸಾ: ಅಗಸೂರು (ಉಳ್ಳಾಗಡ್ಡಿ), ಉದ್ಯೋಗ ಎಂ.ಇ.ಜೆಡ್-7632 ನೇದರ ಚಾಲಕ ಅಂತಾ ನೀಡಿದ ಲಿಖಿತ ಹೇಳಿಕೆಯಲ್ಲಿಯೂ ಕೂಡ ಜಂಗಲ್ದಲ್ಲಿ ತಯಾರಿಸಿ ದಾಸ್ತಾನು ಇಟ್ಟ ಸಾಗವಾನಿ ನಾಟುಗಳನ್ನು ಟ್ರಕ್ಕಿನ ಮೇಲೆ ಹೇರುವ ಕಾಲಕ್ಕೆ ತನ್ನ ಹತ್ತಿರ ಯಾವುದೇ ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲ ಎಂದು ಹೇಳಿದಾಗ ಇಲಾಖಾ ಸಿಬ್ಬಂದಿ ಜನರು ಟ್ರಕ್ ನಂ. ಎಂ.ಇ.ಜೆಡ್-7632 ನೇದ್ದನ್ನು ಮಾಲು ಸಮೇತ

ಪಂಚನಾಮೆಯೊಂದಿಗೆ ತಮ್ಮ ತಾಬಾಕ್ಕೆ ತೆಗೆದುಕೊಂಡಿದ್ದು ನಿಜವಿರುತ್ತದೆ ಎನ್ನುವ ಹೇಳಿಕೆಯೂ ಕೂಡ ಸದರಿ ವಾಹನವನ್ನು ಮೇಲ್ಕಾಣಿಸಿದ ಅಪರಾಧದಲ್ಲಿ ಉಪಯೋಗಿಸಿದ್ದು ದೃಢಪಡುತ್ತದೆ.

ಮೇಲಿನ ಎಲ್ಲಾ ದಾಖಲೆ ಹೇಳಿಕೆಗಳು ಲಾರಿ ನಂ. ಎಂ.ಇ.ಜೆಡ್-7632 ಇದನ್ನು ದಿನಾಂಕ: 23.7.1996 ರಂದು ಅಂಕೋಲಾ ತಾಲೂಕು ಹೆಬ್ಬುಳ ಸ.ನಂ. 72ರಲ್ಲಿ ನಡೆದ ಅರಣ್ಯ ಅಪರಾಧ ಪ್ರಥಮ ಮಾಹಿತಿ ವರದಿ ನಂ. 8/95-96 ರಡಿಯಲ್ಲಿ ದಾಖಲಿಸಿದ ಗುನ್ನೆಯಲ್ಲಿ ಸಾಗವಾನಿ ನಾಟಾಗಳ ಕಳ್ಳ ಸಾಗಾಣಿಕೆಗಾಗಿ ಉಪಯೋಗಿಸಿದ್ದು ದೃಢಪಟ್ಟಿದೆ.

ಕ) ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ದಾಖಲಾತಿಗಳನ್ನು ಹೇಳಿಕೆಗಳನ್ನು ಪರಿಶೀಲಿಸಲಾಗಿ

ಮೇಲ್ಕಾಣಿಸಿದ ಅರಣ್ಯ ಅಪರಾಧ ನಡೆದ ಸಮಯದಲ್ಲಿ ಸ್ಥಳದ ಮೇಲೆ ಅನಧಿಕೃತವಾಗಿ ಕಡಿದು ತಯಾರಿಸಿದ ಸಾಗವಾನಿ ನಾಟುಗಳನ್ನು ಲಾರಿಯಲ್ಲಿ ಹೇರುವಾಗ ಅಪರಾಧಿಗಳನ್ನು ಇಲಾಖಾ ಸಿಬ್ಬಂದಿ ಪಂಚ ಜನರೊಂದಿಗೆ ಅಟಕಾಯಿಸಿದಾಗ ಅಲ್ಲಿ ವಾಹನದ ಚಾಲಕನಾದ ಶ್ರೀ ಮುರಳೀಧರ ದೇವಿದಾಸ ನಾಯಕ, ಸಾ: ಅಗಸೂರು ಉಳ್ಳಾಗಡ್ಡಿ ಹಾಗೂ ವಿಷ್ಣು ಸಣ್ಣಕೂಸ ಗೌಡಾ, ಸಾ: ಮೂಲಕೇರಿ ತಾ: ಕುಮಟಾ ಇವರು ಮಾತ್ರ ಸಿಕ್ಕು ಬಿದ್ದಿದ್ದು, ಉಳಿದವರು ಓಡಿ ಹೋಗುವಲ್ಲಿ ಯಶಸ್ವಿಯಾಗಿದ್ದಾರೆ (ಪಿ-1).

ಈ ಸಿಕ್ಕು ಬಿದ್ದ ಅಪರಾಧಿಗಳನ್ನು ವಿಚಾರಿಸಿ ಅವರಿಂದ ಪಡೆಯಲಾದ ಹೇಳಿಕೆಗಳನ್ನು ಪರಿಶೀಲಿಸಲಾಗಿ, ಶ್ರೀ ವಿಷ್ಣು ಸಣ್ಣಕೂಸ ಗೌಡಾ, ಸಾ: ಮೂಲಕೇರಿ ತಾ: ಕುಮಟಾ ಇವರು ವಲಯ ಅರಣ್ಯಾಧಿಕಾರಿಗಳ ಸಮಕ್ಷಮ ನೀಡಿದ ಹೇಳಿಕೆಯಲ್ಲಿ ತಾನು ಟ್ರಕ್ ನಂ. ಎಂ.ಇ.ಜೆಡ್-7632 ನೇದ್ದರಲ್ಲಿ ಚಾಲಕ ಶ್ರೀ ಮುರಳೀಧರ ದೇವಿದಾಸ ನಾಯಕ ಇವರ ಜೊತೆಗೂಡಿ ದಿನಾಂಕ: 23.7.96 ರಂದು ಬೆಳಗ್ಗಿನ ಜಾವ 4.00 ಗಂಟೆಗೆ ಸುಂಕಸಾಳ ಬಳಿ ಇರುವ ಕುರುಕಲಗದ್ದೆ ಜಂಗಲ್‌ದಲ್ಲಿ ಟ್ರಕ್ ನಿಲ್ಲಿಸಿ ಮೊದಲೇ ತಯಾರಿಸಿದ ದಾಸ್ತಾನು ಇಟ್ಟ ಸಾಗವಾನಿ ನಾಟುಗಳನ್ನು ನಾವು ಟ್ರಕ್‌ನ ಮೇಲೆ ಹೇರುತ್ತಿರುವ ಕಾಲಕ್ಕೆ ವಲಯ ಅರಣ್ಯಾಧಿಕಾರಿ ಇವರು ತಮ್ಮ ಸಿಬ್ಬಂದಿ ಜನರೊಂದಿಗೆ ಬಂದು ಅಟಕ ಮಾಡಿ ಹಿಡಿದು ಪಾಸ್ ವ ಪರ್ಮಿಟ್ ಇದೆಯೋ ಹೇಗೆ ಎಂದು ಕೇಳಿ ನನ್ನ ಹತ್ತಿರ ಪಾಸ್ ವ ಪರ್ಮಿಟ್ ಇಲ್ಲವೆಂದಾಗ ಲಾರಿ ನಂ. ಎಂ.ಇ.ಜೆಡ್-7632 ನೇದ್ದನ್ನು ಮಾಲು ಸಮೇತ ಪಂಚನಾಮೆಯೊಂದಿಗೆ ತಾಬಾಕ್ಕೆ ತೆಗೆದುಕೊಂಡದ್ದು ಇರುತ್ತದೆ ಅಂತಾ ಹೇಳಿಕೆ ನೀಡುತ್ತಾ, ಪರ್ಮಿಟ್ ಇಲ್ಲದೇ ಸಾಗವಾನಿ ನಾಟುಗಳನ್ನು ಹೇರುವುದು ಅಪರಾಧ ಎಂದು ನನಗೆ ಗೊತ್ತಿರಲಿಲ್ಲ. ಆದ್ದರಿಂದ ದಯಾಳುಗಳು ಇದೊಂದು ಸಲ ನನಗೆ ಮಾಫಿ ಮಾಡಬೇಕು ಒಂದು ವೇಳೆ ಮಾಫಿ ಮಾಡಲು ಆಗದೇ ಇದ್ದಲ್ಲಿ ಸರ್ಕಾರದವರು ವಿಧಿಸಿದ ದಂಡ ತುಂಬಿ ಗುನ್ನೆ ನಿಖಾಲೆ ಮಾಡಿಕೊಳ್ಳಲು ಕಬೂಲ ಇದ್ದೇನೆ ಅಂತಾ ಹೇಳಿಕೆ ಕೊಟ್ಟಿರುತ್ತಾರೆ.

ಇದೇ ರೀತಿ ವಾಹನದ ಚಾಲಕನಾದ ಶ್ರೀ ಮುರಳೀಧರ ದೇವಿದಾಸ ನಾಯಕ, ಸಾ: ಅಗಸೂರು ಉಳ್ಳಾಗಡ್ಡಿ ಇವರು ಸಹ ಮೇಲಿನಂತೆ ಹೇಳಿಕೆ ನೀಡುತ್ತಾ ಅಪರಾಧವನ್ನು ಒಪ್ಪಿಕೊಂಡಿದ್ದಾರೆ. ಆದರೆ ಇವರಲ್ಲಿ ಯಾರೂ ತಾನು ಲಾರಿಯ ಮಾಲೀಕ ಅಂತಾ ಹೇಳಿರುವುದಿಲ್ಲ. ಹಾಗೂ ಲಾರಿಯಲ್ಲಿ ಅದಕ್ಕೆ ಸಂಬಂಧಿಸಿದ ಯಾವುದೇ ದಾಖಲೆ ಸಿಗದೇ ಇದ್ದುದರಿಂದ ಲಾರಿಯ ಮಾಲೀಕರ ವಿಳಾಸ ತಿಳಿಸುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಾರವಾರ ಇವರಿಗೆ ದಿನಾಂಕ: 9.8.1996 ರಂದು ವಿಚಾರಿಸಲಾಗಿ, ಸದರಿ ಮಾಲೀಕರ ವಿಳಾಸವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರು ದಿನಾಂಕ: 27.1.1999 ರಂದು ನೀಡಿದರು. ಸದರಿ ವಿಳಾಸದ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ. ಯಶವಂತ ರಾಮ ಶ್ಯಾನಭಾಗ, ಅಜ್ಜಿಕಟ್ಟಾ ತಾ: ಅಂಕೋಲಾ, ಜಿಲ್ಲಾ ಉತ್ತರಕನ್ನಡ ಇವರಿಗೆ ಈ ನ್ಯಾಯಾಲಯದಿಂದ ದಿನಾಂಕ: 12.3.1999 ರಂದು ಸದರಿ ಅರಣ್ಯ ಅರಪಾಧದಲ್ಲಿ ತೊಡಗಿ ಸಿಕ್ಕು ಹಾಕಿಕೊಂಡಿರುವ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂಬ ಬಗ್ಗೆ ಸಮಜಾಯಿಸಿ ಕೇಳಲಾಗಿ, ದಿನಾಂಕ: 25.03.1999 ರಂದು ವಾಹನದ ಮಾಲೀಕರು ಅರ್ಜಿ ಸಲ್ಲಿಸುತ್ತಾ, ಸದರಿ ಟ್ರಕ್ ನಂ. ಎಂ.ಇ.ಜೆಡ್-7632 ಇದು ತನ್ನ ಸ್ವಂತದ್ದು ಇದ್ದರೂ ಕೂಡ ಅದನ್ನು ನಾನು ಕೆಲ ವೈಯಕ್ತಿಕ ಕಾರಣಗಳಿಂದಾಗಿ ಹಾಗೂ ಅನಾರೋಗದ್ಯ ನಿಮಿತ್ತ ಶ್ರೀ ಸಣ್ಣಕೂಸ ಬಲೀಂದ್ರ ಗೌಡಾ, ಕಂಟ್ರಾಕ್ಟರ್, ಸಾ: ಮೂಲೆಕೇರಿ, ತಾ: ಕುಮಟಾ ಇವರಿಗೆ ಬಾಡಿಗೆ ಆಧಾರದ ಮೇಲೆ (ಪ್ರತಿ ತಿಂಗಳಿಗೆ ರೂ. 4000.00 ರಂತೆ) ಕೊಡುತ್ತಿದ್ದು, ಸದರಿ ಗುತ್ತಿಗೆದಾರರು ವಾಹನದ ಚಾಲಕ ಅಂತಾ ಶ್ರೀ ಮುರಳೀಧರ ದೇವಿದಾಸ ನಾಯಕ ಇವರನ್ನು ತೆಗೆದುಕೊಂಡಿದ್ದು, ಈಗ ನಡೆದ ಅರಣ್ಯ ಕಳ್ಳ ಸಾಗಾಣಿಕೆ ಅಪರಾಧಕ್ಕೂ ನನಗೂ ಯಾವುದೇ ಸಂಬಂಧವಿರುವುದಿಲ್ಲಾ. ತಾನು ವಾಹನವನ್ನು ಬಾಡಿಗೆ ನೀಡಬೇಕಾದರೆ ವಾಹನವನ್ನು ಉಪಯೋಗಿಸುವಾಗ ಅಧಿಕೃತ ಪರವಾನಗಿ, ಪಾಸು ಪರ್ಮಿಟ್ ಇಲ್ಲದೇ ಯಾವುದೇ ನಿರ್ಬಂಧದ ವಸ್ತುಗಳ ಸಾಗಣೆ ಮಾಡಬಾರದಾಗಿ ಹೇಳಿ, ಕಾನೂನು ಬಾಹಿರವಾದ ಯಾವುದೇ ಕೆಲಸಗಳಿಗೆ ತನ್ನ ಲಾರಿಯನ್ನು ಉಪಯೋಗಿಸಬಾರದಾಗಿ ಷರತ್ತು ಹಾಕಿದ್ದೆ. ಆದ್ದರಿಂದ ವಾಹನವನ್ನು ಬಾಡಿಗೆ ತೆಗೆದುಕೊಂಡವರಾಗಲೀ ಅವರ ಚಾಲಕರಾಗಲೀ ಎಸಗಿದ ಅಪರಾಧಗಳಿಗೆ ತಾನು ಹೊಣೆಗಾರನಲ್ಲವೆಂದು ಹೇಳುತ್ತಾ ತನ್ನ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಬಾರದಾಗಿ ವಿನಂತಿಸಿದ್ದಾರೆ. ಮುಂದುವರೆದು ವಾಹನದ ಸದ್ಯದ ಕಿಮ್ಮತ್ತು ಸುಮಾರು ರೂ. 80000.00 ಆಗಬಹುದಾಗಿದ್ದು, ಈ ಬಗ್ಗೆ ಮಾನ್ಯ ನ್ಯಾಯಾಲಯವು ವಿಧಿಸಬಹುದಾದ ಶರ್ತುಗಳು ಹಾಗೂ ಭದ್ರತಾ ಠೇವಣಿ ನೀಡಲು ಕಬೂಲ ಇರುವುದಾಗಿ ವಿನಂತಿಸಿಕೊಂಡಿದ್ದಾರೆ.

ಸದರಿಯವರ ಹೇಳಿಕೆಯನ್ನು ಪರಿಶೀಲಿಸಲಾಗಿ, ಸದರಿ ವಾಹನದ ಮಾಲೀಕರು ಅರಣ್ಯ ಅಪರಾಧದಲ್ಲಿ ವಾಹನವನ್ನು ದಿನಾಂಕ: 23.07.1996 ರಂದು ಅರಣ್ಯ ಅಪರಾಧ ಪ್ರಕರಣದಲ್ಲಿ ಜಪ್ತಿ ಮಾಡಲಾಗಿದ್ದರೂ ಈ ನ್ಯಾಯಾಲಯದಿಂದ ನೋಟೀಸು ಹೋಗುವವರೆಗೂ ಸುಮಾರು ಎರಡು ವರ್ಷಗಳಿಗಿಂತ ಹೆಚ್ಚಿನ ಅವಧಿ ಕಳೆಯುವವರೆಗೂ ತಮ್ಮ ವಾಹನದ ಬಗೆ ಏನನ್ನೂ ವಿಚಾರಿಸದೇ ಅದಕ್ಕೆ ಕೋರ್ಟಿನಿಂದ ನೋಟೀಸು ನೀಡಿದಾಗ ಮಾತ್ರ ಪ್ರತಿಕ್ರಿಯಿಸುವುದನ್ನು ನ್ಯಾಯಾಲಯ ಸೂಕ್ಷ್ಮವಾಗಿ ಅವಲೋಕಿಸುತ್ತದೆ.

ವಾಹನದ ಮಾಲೀಕರು ತಮ್ಮ ಟ್ರಕ್‌ನ್ನು ಬೇರೆಯವರಿಗೆ ಬಾಡಿಗೆ ಆಧಾರದ ಮೇಲೆ ನೀಡಿದ ಬಗ್ಗೆ ಆಗಲಿ, ಸದರಿ ವಾಹನವನ್ನು ಯಾವುದೇ ಅನಧಿಕೃತ ಕೆಲಸಗಳಿಗೆ ಉಪಯೋಗಿಸಬಾರದೆಂಬ ಬಗ್ಗೆ ಆಗಲಿ, ತನ್ನ ಟ್ರಕ್‌ನ್ನು ಯಾವುದೇ ಕಾನೂನು ಬಾಹಿರ ಕೃತ್ಯಗಳಿಗೆ ಉಪಯೋಗಿಸಬಾರದೆಂಬ ಬಗ್ಗೆ ತನ್ನ ಬಾಡಿಗೆದಾರರೊಂದಿಗೆ ಮಾಡಿಕೊಂಡ ಒಪ್ಪಂದದ ಬಗ್ಗೆಯಾಗಲೀ ಯಾವುದೇ ದಾಖಲೆಗಳನ್ನು ಈ ನ್ಯಾಯಾಲಯದ ಎದುರು ಹಾಜರುಪಡಿಸಿರುವುದಿಲ್ಲವಾದ್ದರಿಂದ, ಸದರಿ ವಾಹನದ ದುರುಪಯೋಗ ತನ್ನ ಗಮನಕ್ಕೆ ಬಾರದೇ ಆಗಿದೆ ಎಂಬುದನ್ನು ನಂಬಲಿಕ್ಕೆ ಸಾಧ್ಯವಿಲ್ಲ. ಪ್ರಸ್ತುತ ಪ್ರಕರಣದಲ್ಲಿ ಸದರಿ ಲಾರಿಯನ್ನು ಸಾಗವಾನಿ ನಾಟುಗಳ ಕಳ್ಳ ಸಾಗಾಣಿಕೆಯಲ್ಲಿ ಬಳಕೆಯಾಗದಂತೆ ಲಾರಿಯ ಮಾಲೀಕರು ಅಥವಾ ಈ ವಾಹನದ ಜವಾಬ್ದಾರಿಯನ್ನು ಹೊಂದಿದವರು ಸಾಕಷ್ಟು ಮುಂಜಾಗರೂಕತಾ ಕ್ರಮಗಳನ್ನು ಕೈಕೊಳ್ಳುವಲ್ಲಿ ವಿಫಲರಾಗಿದ್ದಾರೆ ಎನ್ನುವುದು ಸ್ಪಷ್ಟವಾಗಿ ಕಂಡು ಬರುತ್ತದೆ.

ಡ) ಸರ್ಕಾರದ ಪರ ಹಾಗೂ ವಿರೋಧದ ಸಾಕ್ಷಿಗಳು ಹಾಗೂ ವಾದ ವಿವಾದಗಳನ್ನು ಆಲಿಸಿ, ಹಾಜರುಪಡಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ, ವಾಹನ ಸಂಖ್ಯೆ: ಎಂ.ಇ.ಜೆಡ್-7632 ಇದನ್ನು ಸಾಗವಾನಿ ಕಟ್ಟಿಗೆಯ ಕಳ್ಳ ಸಾಗಾಣಿಕೆಯಲ್ಲಿ ಉಪಯೋಗಿಸಿದ್ದು ಸಾಬೀತಾಗುತ್ತದೆ. ಹಾಗೂ ಸದರಿ ವಾಹನವನ್ನು ಮೇಲ್ಕಾಣಿಸಿದ ಅರಣ್ಯ ಅಪರಾಧದಲ್ಲಿ ಬಳಕೆಯಾಗದಂತೆ ಮುಂಜಾಗ್ರತೆ ವಹಿಸುವಲ್ಲಿ ವಾಹನದ ಮಾಲೀಕರಾಗಲೀ ಅಥವಾ ವಾಹನದ ಜವಾಬ್ದಾರಿಯನ್ನು ಹೊಂದಿದವರಾಗಲೀ ಸಾಕಷ್ಟು ಪ್ರಯತ್ನ ಮಾಡದೇ ಇರುವುದು ಕಂಡು ಬರುತ್ತದೆ. ಆದ್ದರಿಂದ ಜಪ್ತಿ ಮಾಡಲಾದ ವಾಹನ ಲಾರಿ ನಂ. ಎಂ.ಇ.ಜೆಡ್-7632ನ್ನು ಕರ್ನಾಟಕ ಅರಣ್ಯ ಕಾಯ್ದೆ 71ಎ ದರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆಂಬ ಅಂಶ ನನಗೆ ಮನದಟ್ಟಾಗಿದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ನೀಡಿದೆ.

**ಆದೇಶ**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಜಿ. ವಿ. ರಂಗರಾವ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವುದೇನೆಂದರೆ, ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಅರಣ್ಯ ಕಾಯ್ದೆ 1963 ರ ಅನುಚ್ಛೇದ 71 (ಎ) (ಈ ತಾರೀಖಿನವರೆಗೆ ಆದ ತಿದ್ದುಪಡಿ) ಪ್ರಕಾರ ಲಾರಿ ನಂ. ಎಂ.ಇ.ಜೆಡ್-7632 ನ್ನು ಮತ್ತು ಅದರಲ್ಲಿದ್ದ 23 ಸಾಗವಾನಿ ನಾಟು 1.429 ಘ.ಮೀ. ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ**

| | | | |
|---|---|---|---|
| 1) | ವಾಹನದ ಮಾದರಿ | : | ಟಾಟಾ ಲಾರಿ |
| 2) | ನೋಂದಣಿ ಸಂಖ್ಯೆ | : | ಎಂ.ಇ.ಜೆಡ್-7632 |
| 3) | ಇಂಜಿನ್ ನಂ. | : | 692. 1701728468 |
| 4) | ಚಾಸಿ ಸಂಖ್ಯೆ | : | 344. 073. 226969 |

ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 02.08.2004 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಜಿ. ವಿ. ರಂಗರಾವ್, ಭಾ.ಅ.ಸೇ.,**
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕಾರವಾರ ವಿಭಾಗ, ಕಾರವಾರ.

ಪಿ.ಆರ್.1196

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಹಳಿಯಾಳ ವಿಭಾಗ,**
**ಹಳಿಯಾಳ ರವರ ನ್ಯಾಯಾಲಯ**

**ತಿದ್ದುಪಡಿ ಆದೇಶ**

**ಸಂ.ಎಫ್‌ಓಸಿ:ಎಫ್‌ಓಪಿ:ವಾಹನ:ಮುಟ್ಟುಗೋಲು 03-04 ದಿನಾಂಕ: 6ನೇ ಆಗಸ್ಟ್ 2004**

**ವಿಷಯ :** ಅನಧಿಕೃತವಾಗಿ ಅರಣ್ಯ ಉತ್ಪತ್ತಿಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುವ ಕುರಿತು.

**ಉಲ್ಲೇಖ :** 1. ಈ ಕಛೇರಿ ಸಮಸಂಖ್ಯೆ ಅಂತಿಮ ಆದೇಶ ದಿನಾಂಕ: 23.10.2003.

ಈ ವಿಭಾಗದಲ್ಲಿ ಅನಧಿಕೃತವಾಗಿ ಅರಣ್ಯ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನ ಸಂಖ್ಯೆ: ಕೆಎ-22/ಎಮ್-5272 ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು, ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡ ಆದೇಶದಲ್ಲಿ ನಜರಚೂಕಿನಿಂದ ಸದರಿ ವಾಹನದ ಚಾಸಿ ನಂಬರ್: 931597 ತಪ್ಪಾಗಿದ್ದು ಅದನ್ನು 931897 ಎಂದು ಓದಿಕೊಳ್ಳಬೇಕಾಗಿ ಈ ಮೂಲಕ ತಿದ್ದುಪಡಿ ಆದೇಶ ಹೊರಡಿಸಿದ್ದೇವೆ. ಈ ಆದೇಶವನ್ನು ಈ ದಿನ ದಿನಾಂಕ: 6.8.2004 ರಂದು ಅಧಿಕೃತ ಮುದ್ರೆ ಮತ್ತು ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ರಾಮಚಂದ್ರ, ಭಾ.ಅ.ಸೇ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಹಳಿಯಾಳ ವಿಭಾಗ, ಹಳಿಯಾಳ.

ಪಿ.ಆರ್.1197

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ

**ಪ್ರಕಟಣೆ**

**ಸಂಖ್ಯೆ.ಎ3:ಅಮೊ:71(ಎ)ವಾಹನ/ 2002-03 ದಿನಾಂಕ: 5ನೇ ಆಗಸ್ಟ್ 2004**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಶ್ರೀಗಂಧ/ಅರಣ್ಯೋತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ಈ ಕೆಳಕಂಡ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 71(ಎ)ಯ ಪ್ರಕಾರ ಮುಂದಿನ ದಾವೆ ನಡೆಸಲು ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿಗಳು ಈ ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಆದುದರಿಂದ ಸದರಿ ವಾಹನಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಯಾವುದೇ ಹಕ್ಕು ಬಾಧ್ಯತೆಗಳನ್ನು ರುಜುವಾತು ಪಡಿಸುವುದಿದ್ದಲ್ಲಿ ಅಂತಹ ವ್ಯಕ್ತಿಗಳು ತಮ್ಮಲ್ಲಿರುವ ವಾಹನದ ಮಾಲೀಕತ್ವದ ಮೂಲ ದಾಖಲಾತಿಗಳೊಂದಿಗೆ ಈ ಪ್ರಕಟಣೆಯು ಪ್ರಕಟವಾದ 30 ದಿವಸಗಳೊಳಗಾಗಿ ಈ ನ್ಯಾಯಾಲಯದ ಮುಂದೆ ಹಾಜರಾಗಿ ರುಜುವಾತು ಪಡಿಸುವುದು. ನಿಗದಿತ ಅವಧಿಯ ನಂತರ ಬಂದ ಯಾವುದೇ ಅಹವಾಲನ್ನು ಪರಿಗಣಿಸಲಾಗುವುದಿಲ್ಲ. ಹಾಗೂ 1963ರ ಕನಾಟಕ ಅರಣ್ಯ ಕಾಯಿದೆ 71(ಎ) ನಿಂದ ಎಫ್ ರವರೆಗಿನ ವಿಧಿಯಂತೆ ಮುಂದಿನ ಕ್ರಮ ಜರುಗಿಸಲಾಗುವುದೆಂದು ತಿಳಿಸಲಾಗಿದೆ.

| ಕ್ರ. ಸಂ. | ಅರಣ್ಯ ಮೊಕದ್ದಮೆ ಸಂಖ್ಯೆ ಮತ್ತು ದಿನಾಂಕ | ವಾಹನದ ವಿವರ ಹಾಗೂ ನೋಂದಣಿ ಸಂ. | ಇಂಜಿನ್ ಸಂಖ್ಯೆ | ಛಾಸ್ಸಿಸ್ ಸಂಖ್ಯೆ | ಅರಣ್ಯೇತರ ಉತ್ಪನ್ನದ ವಿವರ |
|---|---|---|---|---|---|
| 1 | 78/2002-03<br>28.03.2002 | ಹೀರೋ ಹೊಂಡ<br>ಸ್ಪ್ಲೆಂಡರ್ KA-20-J-5604 | 00E18M 26357 | 00E20C 26424 | ಶ್ರೀಗಂಧದ ತುಂಡುಗಳು ಮತ್ತು ಚಕ್ಕೆ ಒಟ್ಟು 10.00 ಕೆ.ಜಿ. |
| 2 | 5/2003-04<br>23.04.2003 | ಮಹೀಂದ್ರ ಜೀಪು<br>MYK-696 | ವಿಲ್ಲೀಸ್-4517046 | CJ-4-46397 | ಬೀಟೆ ತುಂಡುಗಳು 12=0.224 ಘ.ಮೀ. |
| 3 | 13/2003-04<br>13.07.2003 | ಬಜಾಜ್ ಚೇತಕ್ ಸ್ಕೂಟರ್<br>KA-14-H-5168 | 60-E95A96319 | 60C-95A91198 | ಶ್ರೀಗಂಧದ ತುಂಡುಗಳು ಮತ್ತು ಚಕ್ಕೆ ಒಟ್ಟು 11.00 ಕೆ.ಜಿ. |
| 4 | 15/2003-04<br>23.07.2003 | ಬಜಾಜ್ M-80 ಸ್ಕೂಟರ್<br>KA-14-4485 | 16E-94L-132881328 | 160942L-80824 | ಶ್ರೀಗಂಧ 8.00 ಕೆ.ಜಿ. |
| 5 | 16/2003-04<br>23.07.2003 | ಟಿಲ್ಲರ್<br>KA-15-T-1708<br>KA-15-T-1709 | S99-6038 | S99-6 | ಬೀಟೆ ನಾಟಾ 2.147 ಘ.ಮೀ. |
| 6 | 17/2003-04<br>23.07.2003 | ಬಜಾಜ್ M-80 ಸ್ಕೂಟರ್<br>KA-20-2427 | 16EBGA-62774 | 16C-BGA-62003 | ಶ್ರೀಗಂಧ 7.00 ಕೆ.ಜಿ. |

**ಜಿ. ಎ. ಎನ್. ಕರ್ಕೀಕರ್**

ಪಿ.ಆರ್.1198 ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರುರವರ ನ್ಯಾಯಾಲಯ

**ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71 (ಬಿ) ಪ್ರಕಾರ ನೋಟೀಸ್**

**ಸಂಖ್ಯೆ.ಎ8(ಎ):ಅಮೊ:46:2003-04 ದಿನಾಂಕ: 30ನೇ ಜುಲೈ 2004**

ತುಮಕೂರು ತಾಲ್ಲೂಕು ಹೆಬ್ಬೂರು ಹೋಬಳಿ ರಾಮಕೃಷ್ಣಪುರ ಗ್ರಾಮದಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡಲು ಉಪಯೋಗಿಸಿದ್ದ ಕೆಎ-06-ಇ-3582 ಟಿವಿಎಸ್-ಚಾಂಪ್ ಮತ್ತು ಟಿವಿಎಸ್-50 ಎಕ್ಸ್‌ಎಲ್-ಕೆಎ:11:ಜೆ:4608 ನ್ನು ಮಾಲು ಸಮೇತ ವಾಹನಗಳನ್ನು ವಲಯ ಅರಣ್ಯಾಧಿಕಾರಿ, ತುಮಕೂರುರವರು ಇಲಾಖಾ ಪರ ಅಮಾನತ್ತುಪಡಿಸಿರುತ್ತಾರೆ.

ಕೆಎ-06-ಇ-3582 ಟಿವಿಎಸ್ ಚಾಂಪ್ ಮಾಲೀಕರಾದ ಶ್ರೀ ಎ. ಬಿ. ಹಕೀಂ ಬಿನ್ ಅನ್ವರ್‌ಭಾಷಾ, ಗುಂಡಿಬಂಡ ವಡ್ಡರಹಟ್ಟಿ, ಗುಂಡಿಬಂಡರವರು, ಸದರಿ ವಾಹನವನ್ನು ಶ್ರೀ ನಂಜಪ್ಪ, ಕೊರಟಗೆರೆರವರಿಗೆ ಮಾರಾಟ ಮಾಡಿರುವುದಾಗಿಯೂ, ಈ ಪ್ರಕರಣಕ್ಕೂ ಇವರಿಗೂ ಯಾವುದೇ ಸಂಬಂಧವಿರುವುದಿಲ್ಲವೆಂದು ತಿಳಿಸಿ, ಖರೀದಿದಾರರ ಪೂರ್ಣ ವಿವರಗಳನ್ನು ಸಲ್ಲಿಸಿರುವುದಿಲ್ಲ. ಹಾಗೂ ಮತ್ತೊಂದು ವಾಹನದ ಮಾಲೀಕರಾದ ಶ್ರೀ ಮಮ್ತಾಜ್‌ಪಾಷ ಬಿನ್ ಬಾಷಾಸಾಬ್, ನಾಗಮಂಗಲರವರಿಗೆ ಕಳುಹಿಸಲಾಗಿದ್ದ ನೋಟೀಸ್ ವಾಪಸ್ ಬಂದಿರುತ್ತದೆ. ಈವರೆವಿಗೂ ಯಾರಿಂದಲೂ ತಕರಾರು ಬಂದಿರುವುದಿಲ್ಲ. ಆದಕಾರಣ ನೀವುಗಳು ಸದರಿ ವಾಹನಗಳಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡುವ ಮೂಲಕ ಅಪರಾಧ ಎಸಗಿರುವಿರೆಂದು ತಿಳಿಯಲಾಗಿದೆ. ಆದ ಕಾರಣ ಸದರಿ ವಾಹನಗಳು ಹಾಗೂ ಶ್ರೀಗಂಧವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಯಿಂದ 71(ಜಿ) ಪ್ರಕಾರ ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳ ಬಾರದು ಎಂಬುದಕ್ಕೆ ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ನಿಮ್ಮ ಹೇಳಿಕೆ ಹಾಗೂ ಇಕರಾರನ್ನು ಖುದ್ದಾಗಿ ಹಾಜರುಪಡಿಸದಿದ್ದಲ್ಲಿ ಮೇಲ್ಕಂಡ ವಾಹನ ಮತ್ತು ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.1199 ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-5**

**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-6/2004 ದಿನಾಂಕ: 9ನೇ ಆಗಸ್ಟ್ 2004**

**ಅರ್ಜಿದಾರರು :** ವಿರುದ್ಧ **ಪ್ರತಿವಾದಿಗಳು :**

ಅರ್ಜಿದಾರರು:

1. ಶ್ರೀಮತಿ ಶೋಭ ಕೋಂ ಲೇಟ್ ಜಯರಾಮ್ ಸಿಂಗ್
2. ಕು. ಭವಾನಿ ಬಿನ್ ಲೇಟ್ ಜಯರಾಮ್ ಸಿಂಗ್
3. ಮಾ: ಶಿವಸಿಂಗ್ ಬಿನ್ ಲೇಟ್ ಜಯರಾಮ್ ಸಿಂಗ್ ನಂ. 42, ಶಕ್ತಿ ನಿಲಯದ ಹಿಂಭಾಗ ಐ.ಪಿ.ಎ.ಡಿವೈಸಸ್ ಹತ್ತಿರ, ಹೆಸರಘಟ್ಟ ರಸ್ತೆ, ಬೆಂಗಳೂರು.

ಪ್ರತಿವಾದಿಗಳು:

1. ಶ್ರೀಮತಿ ಆರ್. ರೇಣುಕಾ ಕೋಂ ಶಿವರುದ್ರಪ್ಪ, ನಂ. 209, 4ನೇ ಕ್ರಾಸ್, 4ನೇ ಬ್ಲಾಕ್, 1ನೇ ಹಂತ, ಬಸವೇಶ್ವರ ನಗರ, ಬೆಂಗಳೂರು.
2. ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ನಂ.101/2, ಎಫ್-1, ಸ್ವಸ್ತಿಕ್ ಮಾನಂದಿ ಆರ್ಕೇಡ್, ಎಸ್.ಸಿ. ರಸ್ತೆ, ಶೇಷಾದ್ರಿಪುರಂ ಪೊಲೀಸ್ ಸ್ಟೇಷನ್ ಎದುರು, ಬೆಂಗಳೂರು.

**ಪ್ರಕಟಣೆ:**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 5.8.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1ನೇ ಅರ್ಜಿದಾರರ ಪತಿ ಹಾಗೂ 2 ಹಾಗೂ 3ನೇ ಅರ್ಜಿದಾರರ ತಂದೆಯಾದ ಶ್ರೀ ಜಯರಾಮ್ ಸಿಂಗ್ ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಎನ್. ಬಿ. ರಾಮಚಂದ್ರ

ಪಿ.ಆರ್.1200

ಕಾರ್ಮಿಕ ಪರಿಹಾರ ಆಯುಕ್ತರು, ಹಾಗೂ ಕಾರ್ಮಿಕ ಅಧಿಕಾರಿ
ಉಪ ವಿಭಾಗ-5, ಬೆಂಗಳೂರು-560 029.

**ಜಿಲ್ಲಾ ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕಟಣೆ**

**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:238:ಎಫ್:2004 ದಿನಾಂಕ: 12ನೇ ಆಗಸ್ಟ್ 2004**

**ಅರ್ಜಿದಾರರು :** ವಿರುದ್ಧ **ಪ್ರತಿವಾದಿಗಳು :**

ಅರ್ಜಿದಾರರು:

1. ಶ್ರೀಮತಿ ನೂರ ಜಂಹಾ ಗಂಡ ಮೊಹ್ಮದ್ ಅಕ್ಬರ
2. ಕುಮಾರಿ ಪಾರದ ತಂದೆ ಮೊಹ್ಮದ ಅಕ್ಬರ
3. ಕು:ಆಸಿಫ: ತಂದೆ ಮೊಹ್ಮದ ಅಕ್ಬರ್
4. ಕುಮಾರಿ: ಅಸಮಾ ತಂದೆ ಮೊಹ್ಮದ್ ಅಕ್ಬರ್
5. ಕು: ಆರೀಫ್ ತಂದೆ ಮೊಹ್ಮದ್ ಅಕ್ಬರ್
6. ಕುಮಾರಿ: ಆಫ್ಷಿನ ತಂದೆ ಮೊಹ್ಮದ್ ಅಕ್ಬರ್ ಸಾ: ಮುನಿರಾಬಾದ್ ತಾ: ಕೊಪ್ಪಳ

ಪ್ರತಿವಾದಿಗಳು:

1. ಪಿ. ವೆಂಕಟೇಶ ತಂದೆ: ಪಿ. ನಾಗೇಶ್ವರರಾವ ಸಾ: ಮುನಿರಾಬಾದ ಆರ್.ಎಸ್. ತಾ:ಜಿ:ಕೊಪ್ಪಳ
2. ಡಿವಿಜನಲ್ ಮ್ಯಾನೇಜರ್, ನ್ಯಾಷನಲ್ ಇನ್ಸುರೆನ್ಸ್ ಕಂ.ಲಿ., ಗುಲಬರ್ಗಾ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ:ಗಾಯ: ಶ್ರೀ ಮೊಹ್ಮದ್ ಅಕ್ಬರ್ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ಕೆಲಸದಿಂದುಂಟಾದ ಅಪಘಾತದಿಂದ ಮೃತ:ಗಾಯ: ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಶ್ರೀಮತಿ: ನೂರಜಂಹಾ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ: ಗಾಯ: ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ

ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್.1201 ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**
**ಸಂಖ್ಯೆ:ಕಾಪಕಾ:ಎಫ್:ಎಸ್‌ಆರ್-28:2004**

**ಅರ್ಜಿದಾರರು :**
1. ಶ್ರೀ ಕೃಷ್ಣೇಗೌಡ ಅಲಿಯಾಸ್ ರಾಜೇಗೌಡ, 60 ವರ್ಷ
2. ಶ್ರೀಮತಿ ಕೆಂಪಮ್ಮ ಕೋಂ ಕೃಷ್ಣೇಗೌಡ ಅಲಿಯಾಸ್ ರಾಜೇಗೌಡ, 52 ವರ್ಷ
3. ಶ್ರೀ ವಿಶ್ವನಾಥ ಬಿನ್ ಕೃಷ್ಣೇಗೌಡ ಅಲಿಯಾಸ್ ರಾಜೇಗೌಡ, 32 ವರ್ಷ
4. ಶ್ರೀಮತಿ ನಾಗಮ್ಮ ಕೋಂ ಶೇಖರೇಗೌಡ, 30 ವರ್ಷ
**ವಾಸ:** ತಾತನಹಳ್ಳಿ ವಿಲೇಜ್, ಹಳ್ಳಿ ಮೈಸೂರು ಹೋಬಳಿ, ಹೊಳೇನರಸೀಪುರ ತಾ:

**ವಿರುದ್ಧ ಪ್ರತಿವಾದಿಗಳು :**
1. ಶ್ರೀ ಎಸ್. ಎನ್. ಮಲ್ಲಿಕ ಕೋಂ ನಾಗರಾಜ್,
**ವಾಸ:** ದೇವರಹಳ್ಳಿ ವಿಲೇಜ್, ಬೀಚನಹಳ್ಳಿ ಪೋಸ್ಟ್, ಅರಕಲಗೂಡು ತಾಲ್ಲೂಕು.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ: **ಟಿ. ಕೆ. ಜಯಸ್ವಾಮಿ ಅಲಿಯಾಸ್ ಪಾಪ** ರವರು ಪ್ರತಿವಾದಿಯವರಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 28.8.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಪಿ.ಆರ್.1202 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ.

**ಕಂಪನಿಗಳ (ನ್ಯಾಯಾಲಯ) ನಿಯಮ, 1959**
**ನಮೂನೆ ಸಂಖ್ಯೆ: 155**
**(ನಿಯಮ 329 ನೋಡಿ)**
**ಸದಸ್ಯರುಗಳ ಸ್ವ-ಇಚ್ಛೆಯಿಂದ ಸ್ಥಗಿತ**
**ಕಂಪನಿ ಹೆಸರು: ಮಧುರಾ ಫೈನಾನ್ಸ್ ಎಂಡ್ ಲೀಸಿಂಗ್ ಪ್ರೈವೇಟ್ ಲಿಮಿಟೆಡ್**
**ಸಭೆ (ಅಂತಿಮ) ನಡೆಸುವ ಕುರಿತು ನೋಟೀಸ್**

ಕಂಪನಿಯ ಕಾಯ್ದೆ 1956ರ 497/509ನೆ ವಿಧಿಯಂತೆ ಮೇಲೆ ಹೆಸರಿಸಿದ ಕಂಪನಿಯ ಸದಸ್ಯರುಗಳ ಸಾಮಾನ್ಯ ಸಭೆ ಕಂಪನಿಯ ನೋಂದಾಯಿತ ಕಛೇರಿ, ಸುವರ್ಣ ಕಾಂಪ್ಲೆಕ್ಸ್, ಹಂಗಳೂರು, ಕುಂದಾಪುರ-576217 ಇಲ್ಲಿ 29ನೇ ಸೆಪ್ಟೆಂಬರ್, 2004 ಬೆಳಿಗ್ಗೆ 10.30 ಗಂಟೆಗೆ, ಸ್ಥಗಿತಗೊಳಿಸಿದ (ವೈಂಡಿಂಗ್ ಅಪ್) ರೀತಿಯ ಕುರಿತು ಲೆಕ್ಕಪತ್ರ ಹಾಜರುಪಡಿಸುವುದು ಮತ್ತು ಕಂಪನಿಯ ಆಸ್ತಿ-ಪಾಸ್ತಿ ವಿಲೇವಾರಿ ಮಾಡಿದ ಕ್ರಮ ಹಾಗೂ ಲಿಕ್ವಿಡೇಟರ್ ಕೊಡಬಹುದಾದ ವಿವರಣೆ ಆಲಿಸಲು ಮತ್ತು ಕಂಪನಿಯ ವಿಶೇಷ ಠರಾವಿನ ಪ್ರಕಾರ ಕಂಪನಿಯ ಮತ್ತು ಲಿಕ್ವಿಡೇಟರ್‌ನ ಕಡತಗಳು, ಲೆಕ್ಕಪತ್ರ ಮತ್ತು ದಾಖಲಾತಿಗಳನ್ನು ವಿಲೇವಾರಿ ಮಾಡುವುದರ ಸಂಬಂಧ ನಡೆಯಲಿದೆ ಎಂದು ಈ ಮೂಲಕ ನೋಟೀಸು ನೀಡಲಾಗಿದೆ.

**ಶ್ಯಾಮ ಸುಂದರ ಜಿ.**
ಲಿಕ್ವಿಡೇಟರ್ ಅವರ ಸಹಿ

**THE COMPANIES (COURT) RULES, 1959**
**FORM No. 155**
**(See Rule 329)**
**Member's voluntary winding up**
**Name of the Company: MADHURA FINANCE & LEASING PRIVATE LIMITED**
**NOTICE CONVENING (FINAL) MEETING**

NOTICE is hereby given in pursuance of section 497/509 of the Companies Act, 1956, that a General Meeting of the members of the above named Company will be held at its Regd. Office at Suvarna Complex, Hanglur, Kundapura-576217 on Wednesday, 29th September, 2004 at 10.30 A.M. for the purpose of having an account laid before them showing the manner in which the winding up has been

conducted and the property of the company disposed off and of hearing any explanation that may be given by the liquidator and also of determining by a special resolution of the Company, the manner in which the books, accounts and documents of the company and of the liquidator shall be disposed off.

**Shyamsunder G.**
Liquidator

PD-54

**ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ, ಚಿಕ್ಕೋಡಿ, (ಬೆಳಗಾವಿ ಉತ್ತರ)**

**ಜ್ಞಾಪನ**

**ನಂ: ಎಸ್‌ಜಿಸು:ಅಮಾನತ್ತು:123:2003-04 ದಿನಾಂಕ: 9ನೇ ಆಗಸ್ಟ್ 2004**

**ವಿಷಯ :** ಶ್ರೀಮತಿ ಎಸ್. ಜಿ. ಸುತಾರ ಸಶಿ ಮರಾಠಿ ಗಂಡು ಮಕ್ಕಳ ಶಾಲೆ ಭೀಮಾಪೂರವಾಡಿ ತಾ: ಚಿಕ್ಕೋಡಿ ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ.

**ಉಲ್ಲೇಖ :**
1. ಕ್ಷೇತ್ರ ಶಿಕ್ಷಣಾಧಿಕಾರಿಗಳು ನಿಪ್ಪಾಣಿ ಇವರ ಪತ್ರ ಸಂಖ್ಯೆ; ಸಿ1: ಅಗೈಹಾ:ಎಸ್‌ಜಿಎಸ್:99-00/207 ದಿನಾಂಕ: 18.6.99
2. ಉಪನಿರ್ದೇಶಕರು, ಸಾಶಿಇ, ಬೆಳಗಾವಿ ಇವರಿಂದ ಪ್ರಕಟಿಸಿದ ಪತ್ರಿಕಾ ಪ್ರಕಟಣೆ ದಿನಾಂಕ: 14.2.2001.
3. ಕೆ. ಸಿ. ಎಸ್. ಆರ್. 108.

**ಪ್ರಸ್ತಾವನೆ:**

ಶ್ರೀಮತಿ ಎಸ್. ಜಿ. ಸುತಾರ ಸಶಿ ಮರಾಠಿ ಗಂಡು ಮಕ್ಕಳ ಶಾಲೆ ಭೀಮಾಪೂರವಾಡಿ ತಾ: ಚಿಕ್ಕೋಡಿ ಆದ ನೀವು ದಿನಾಂಕ 7.6.1999 ರಿಂದ ಅನಧಿಕೃತವಾಗಿ ಶಾಲಾ ಕೆಲಸಕ್ಕೆ ಗೈರುಹಾಜರಾಗಿರುವ ಬಗ್ಗೆ ಉಲ್ಲೇಖ 1 ರಲ್ಲಿಯ ಪ್ರಕಾರ ಕ್ಷೇತ್ರ ಶಿಕ್ಷಣಾಧಿಕಾರಿಗಳು ನಿಪ್ಪಾಣಿ ಇವರು ವರದಿ ಮಾಡಿರುವರು. ವರದಿಯನುಸಾರವಾಗಿ ಸದರಿ ಶಿಕ್ಷಕಿಯರಿಗೆ ಶಾಲಾ ಕೆಲಸಕ್ಕೆ ಹಾಜರಾಗುವಂತೆ ಉಲ್ಲೇಖ 2 ರಲ್ಲಿಯ ಪ್ರಕಾರ ಅವಕಾಶ ನೀಡಿ ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳು ನಿಪ್ಪಾಣಿ ಇವರು ಕೂಡಾ ಸದರಿ ಶಿಕ್ಷಕಿಯರಿಗೆ ಶಾಲಾ ಕೆಲಸಕ್ಕೆ ಹಾಜರಾಗುವ ಕುರಿತು ನೋಟಿಸ್ ನೀಡಿರುತ್ತಾರೆ. ಆದರೆ ಶಾಲಾ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಈ ಅಂಶವನ್ನು ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಆದೇಶ**

ಶ್ರೀ ಎಸ್. ಜಿ. ಸುತಾರ ಸಶಿ ಮರಾಠಿ ಗಂಡು ಮಕ್ಕಳ ಶಾಲೆ ಭೀಮಾಪೂರವಾಡಿ ತಾ: ಚಿಕ್ಕೋಡಿ ಇವರು ದಿನಾಂಕ: 7.6.1999 ರಿಂದ ಅನಧಿಕೃತ ಗೈರು ಹಾಜರು ಉಳಿದು ಶಾಲಾ ಕೆಲಸಕ್ಕೆ ತೊಂದರೆ ಉಂಟು ಮಾಡಿದ್ದರಿಂದ ಹಾಗೂ ಹಲವು ಬಾರಿ ಶಾಲಾ ಕೆಲಸಕ್ಕೆ ಹಾಜರಾಗಲು ತಿಳಿಸಿದ್ದರೂ ಕೆಲಸಕ್ಕೆ ಗೈರುಹಾಜರಿ ಉಳಿದು ಇಲಾಖಾ ನಿಯಮಗಳನ್ನು ಹಾಗೂ ಮೇಲಾಧಿಕಾರಿಗಳ ಆದೇಶ ಉಲ್ಲಂಘನೆ ಮಾಡಿದ್ದು ಸ್ಪಷ್ಟವಾಗುವುದು. ಪ್ರಯುಕ್ತ ಈ ಕುರಿತು ಸದರಿಯವರಿಗೆ ಸಾಕಷ್ಟು ಕಾಲಾವಕಾಶ ನೀಡಿದ್ದರೂ ಈ ವರೆಗೂ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಪ್ರಯುಕ್ತ ಕೆ.ಸಿ.ಎಸ್.ಆರ್. 1957 10 ನಿಯಮ 1(ಎ) ಉಪನಿಯಮದಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಶ್ರೀ ಎಂ. ಎಸ್. ಪಾಟೀಲ ಉಪನಿರ್ದೇಶಕರು, ಸಾ.ಶಿ.ಇ. ಚಿಕ್ಕೋಡಿ ಆದ ನಾನು ಶ್ರೀ ಎಸ್. ಜಿ. ಸುತಾರ, ಸಶಿ ಮರಾಠಿ ಗಂಡು ಮಕ್ಕಳ ಶಾಲೆ ಭೀಮಾಪೂರವಾಡಿ ತಾ: ಚಿಕ್ಕೋಡಿ ಇವರನ್ನು ಕೆ.ಸಿ.ಎಸ್.ಆರ್. 1957 ನಿಯಮ 108 ಹಾಗೂ ಸಿ.ಸಿ.ಎ. ನಿಯಮ 8 (VIII) ರ ಪ್ರಕಾರ ಇವರನ್ನು ಕರ್ತವ್ಯದಿಂದ ವಜಾ ಮಾಡಲಾಗಿದೆ. ಹಾಗೂ ಸದರಿಯವರ ಹಿಂದಿನ ಸೇವೆಯನ್ನು ಮೊಟಕುಗೊಳಿಸಲಾಗಿದೆ.

ಉಪ ನಿರ್ದೇಶಕರು,
ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ
(ಬೆಳಗಾವಿ ಉತ್ತರ).

ಪಿ.ಆರ್. 1204

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕಟಣೆ**

**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:245/ಎಫ್:2004 ದಿನಾಂಕ: 12ನೇ ಆಗಸ್ಟ್ 2004**

**ಅರ್ಜಿದಾರರು :**

1. ಶ್ರೀ ಮುಕುಂದಪ್ಪ ತಂದೆ ಕಳಕಪ್ಪ ಮೇಟಿ ಸಾ: ಕಾಟ್ರಾಳ ತಾ: ಯಲಬುರ್ಗಾ ಜಿ: ಕೊಪ್ಪಳ

**ವಿರುದ್ಧ ಪ್ರತಿವಾದಿಗಳು :**

1. ಶ್ರೀ ಶಿವಪ್ಪ ತಂದೆ ಶೇಖರಪ್ಪ ಸಂಗನಾಳ R/o ಕುಂಬಾರ ಓಣಿ ಗಜೇಂದ್ರ ಗಡ. ತಾ: ರೋಣ ಜಿ: ಗದಗ
2. ಡಿವಿಜನಲ್ ಮ್ಯಾನೇಜರ್, ದಿ. ನ್ಯೂ ಇಂಡಿಯಾ ಅಸುರೆನ್ಸ್ ಕಂ.ಲಿ., ಬಳ್ಳಾರಿ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ:ಗಾಯ: ಶ್ರೀ ಮಲ್ಲಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ಕೆಲಸದಿಂದುಂಟಾದ ಅಪಘಾತದಿಂದ ಮೃತ: ಗಾಯ: ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಶ್ರೀ: ಮುಕುಂದಪ್ಪ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ:ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಪಿ.ಆರ್. 1205 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ ಆವರಣ, ಬೆಂಗಳೂರು-29**
**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:99:2000 ದಿನಾಂಕ: 7ನೇ ಆಗಸ್ಟ್ 2004**

**ಅರ್ಜಿದಾರರು :**

1. ಶ್ರೀಮತಿ ಕೆಂಪಮ್ಮ ಕೋಂ ಲೇಟ್ ಎಸ್. ಕೆ. ದೇವಣ್ಣ,
2. ಡಿ. ಮಂಜುಳ ಶರ್ಮಾ ಡಾ: ಆಫ್ ಲೇಟ್ ಎಸ್. ಕೆ. ದೇವಣ್ಣ
3. ಡಿ. ಅಂಜಲಿ, ಡಾ: ಆಫ್ ಲೇಟ್ ಎಸ್.ಕೆ. ದೇವಣ್ಣ
4. ಡಿ. ಅರುಣ ಬಿನ್ ಲೇಟ್ ಎಸ್. ಕೆ. ದೇವಣ್ಣ ಹೆಚ್.ವಿ. ಹಳ್ಳಿ, ನಾಯಂಡಹಳ್ಳಿ ಅಂಚೆ, ಮೈಸೂರು ರಸ್ತೆ, ಬೆಂಗಳೂರು.

**ವಿರುದ್ಧ ಪ್ರತಿವಾದಿಗಳು :**

1. ಜ್ಯೋತಿ ವಿಶ್ವನಾಥ್ ಕೋಂ ವಿಶ್ವನಾಥ್, ನಂ. 17, 3ನೇ ಮುಖ್ಯ ರಸ್ತೆ, ಬಸವನಗುಡಿ, ಬೆಂಗಳೂರು
2. ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ನಂ. 19:1, 3ನೇ ಕ್ರಾಸ್, ಚಿಕ್ಕಣ ಗಾರ್ಡನ್, ಶಂಕರಮಠ ಕಾಂಪೌಂಡ್, ಬೆಂಗಳೂರು-4

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಕೆಂಪಮ್ಮ ಮತ್ತು ಇತರೆ 3 ಜನ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಎಸ್. ಕೆ. ದೇವಣ್ಣ ಇವರು ಪ್ರತಿವಾದಿ-1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 1206 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬೆಂಗಳೂರು ಉಪ-ವಿಭಾಗ-2, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**
**ಅಂತಿಮ ಅಧಿಸೂಚನೆ**
**ನಂ: ಕೆಎಸ್‌ಎ:ಸಿಆರ್:08/2003-04 ದಿನಾಂಕ: 10ನೇ ಆಗಸ್ಟ್ 2004**

ನಂ. ಕೆಎಸ್‌ಎ ಸಿಆರ್:8/2003-04 ದಿನಾಂಕ: 23.05.2003ರ ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಯಶವಂತಪುರ ಗಜಾನನ ಟಾಕೀಸ್ ಹಿಂಭಾಗದ 2ನೇ ಹಂತದ ಡಾ: ಬಿ. ಆರ್. ಅಂಬೇಡ್ಕರ್ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ, ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಅಧಿಸೂಚನೆಗೆ ಯಾರಿಂದಲೂ ಆಕ್ಷೇಪಣೆಗಳು ಬರದಿದ್ದುದರಿಂದ, ಪ್ರಶ್ನಿತ ಕೊಳಚೆ ಪ್ರದೇಶವನ್ನು ದಿನಾಂಕ: 24.04.2004 ರಂದು ಸ್ಥಳ ಪರಿಶೀಲನೆ ಮಾಡಲಾಗಿದೆ. ಆ ವೇಳೆಯಲ್ಲಿ ಕೊಳಚೆ ನಿರ್ಮೂಲನಾ ಮಂಡಳಿಯ ಅಧಿಕಾರಿಗಳು, ಪ್ರಶ್ನಿತ ಕೊಳಚೆ ಪ್ರದೇಶವಿರುವ ಜಮೀನುಗಳ ಮಾಲೀಕರ ವಿಳಾಸ ಲಭ್ಯವಿಲ್ಲದೆ ಇರುವುದರಿಂದ ಅವರಿಗೆ ನೋಟೀಸುಗಳನ್ನು ಜಾರಿ ಮಾಡಲಾಗಲಿಲ್ಲವೆಂದು ತಿಳಿಸಿದ ಮೇರೆಗೆ ಜಾಗದ ಮಾಲೀಕರಿಗೆ ಪ್ರಿಲಿಮಿನರಿ ಅಧಿಸೂಚನೆಯ ಅಂಶವನ್ನು ಗಮನಕ್ಕೆ ತರವುದಕ್ಕಾಗಿ ದಿನ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಲು ಕೊಳಚೆ ನಿರ್ಮೂಲನಾ ಮಂಡಳಿಯವರಿಗೆ ಸೂಚಿಸಲಾಗಿತ್ತು. ಅದರಂತೆ ಕೊಳಚೆ ನಿರ್ಮೂಲನಾ ಮಂಡಳಿಯವರು ದಿನಾಂಕ: 17.06.2004ರ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿದ್ದು, ಅದಕ್ಕೂ ಸಹಾ ಯಾರಿಂದಲೂ ಆಕ್ಷೇಪಣೆಗಳು ಬಂದಿರುವುದಿಲ್ಲ. ಈ ಪ್ರದೇಶದಲ್ಲಿ ಮೂಲಭೂತ ಸೌಲಭ್ಯಗಳಾದ ರಸ್ತೆ, ಚರಂಡಿ, ಶೌಚಾಲಯಗಳು ಹಾಗೂ ನೀರಿನ ವ್ಯವಸ್ಥೆ ಇಲ್ಲದಿರುವುದರಿಂದ ಹಾಗೂ ಸದರೀ ಪ್ರದೇಶವು ಕೊಳಚೆ ಪ್ರದೇಶದ ಗುಣಲಕ್ಷಣಗಳನ್ನು ಹೊಂದಿರುವುದರಿಂದ, ಅದನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1977ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ, ಈ ಕೆಳ ಷೆಡ್ಯೂಲ್‌ನಲ್ಲಿರುವ ಪ್ರದೇಶವನ್ನು ಸದರೀ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯ ಯಶವಂತಪುರದ ಗಜಾನನ ಟಾಕೀಸ್ ಹಿಂಭಾಗದ 2ನೇ ಹಂತದ ಡಾ: ಬಿ. ಆರ್. ಅಂಬೇಡ್ಕರ್ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಆಸ್ತಿ ಸಂಖ್ಯೆ | ವಿಸ್ತೀರ್ಣ (ಚ.ಅ) | ಚಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
| 1 | ಯಶವಂತಪುರದ ಗಜಾನನ ಟಾಕೀಸ್ ಹಿಂಭಾಗದ 2ನೇ ಹಂತದ ಡಾ: ಬಿ. ಆರ್. ಅಂಬೇಡ್ಕರ್ ಕೊಳಚೆ ಪ್ರದೇಶ | ಪಿ.ಆರ್.ವಿಜಯೇಂದ್ರನ್ | ಬಿಡಿಎ ನಿವೇಶನ 43-ಕೆ | 3505 | ರಸ್ತೆ | 43/ಜೆ | 43/ಎಂ | ರಸ್ತೆ |
| | | 1. ಜೆ. ಎ. ನಿರ್ಮಲ<br>2. ಟಿ. ವಿ. ಸಂಪಂಗಿರಾಮಯ್ಯ<br>3. ಜೆ.ಆರ್. ನಾಗರಾಜ್<br>4. ಹೆಚ್. ಸಿ. ಕುಮಾರ್<br>5. ಮೆ. ರೂಪಾ ಎಂಟರ್ ಪ್ರೈಸಸ್ | 43/ಎಂ | 3718 | ರಸ್ತೆ | 43/ಎಸ್ | ರಸ್ತೆ | 43/ಕೆ |
| | | ಸಿ. ಸರೋಜಿನಿ | 43/ಎನ್ | 3410 | 43/ಎಂ | 43/ಒ | ರಸ್ತೆ | 43/ಜೆ |
| | | ಎನ್. ನರಸಿಂಹರಾಜನ್ | 43/ಒ | 3432 | 43/ಎನ್ | 43/ಪಿ | ರಸ್ತೆ | 43/ಐ |
| | | ಶ್ರೀಮತಿ ಮೀತಾ ಪಿ.ಷಾ | 43/ಸಿರ ಪೈಕಿ | 2414 | 43/ಒ | 43/ಪಿ ರಪೈಕಿ | ರಸ್ತೆ | 43/ಹೆಚ್ |
| | ಒಟ್ಟು | | 16548 ಚ.ಅ. ಅಥವಾ 0-15 ಗುಂಟೆ | | | | | |

**ಜಿ. ಎಸ್. ನಾರಾಯಣಸ್ವಾಮಿ**

ಪಿ.ಆರ್. 1207 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ ಸಂಖ್ಯೆ: 33:ಸಂವಿ:ಸಿಓಪಿ:2004 ದಿನಾಂಕ: 4ನೇ ಆಗಸ್ಟ್, 2004**

ಬೆಂಗಳೂರು ನಗರ ಹಲಸೂರು ಸಂಚಾರ ವಲಯ ಸರಹದ್ದಿಗೆ ಸೇರಿರುವ ಕೇಂಬ್ರಿಡ್ಜ್ ರಸ್ತೆಯ 1ನೇ ಕ್ರಾಸ್ ರಸ್ತೆಯಲ್ಲಿ ವಾಹನದ ಸಂಚಾರ ದಟ್ಟಣೆ ಅಧಿಕವಾಗಿರುವುದರಿಂದ ಆಗಾಗ್ಗೆ ಅಡಚಣೆ ಉಂಟಾಗಿ ಸಂಚಾರ ಸ್ಥಗಿತಗೊಳ್ಳುತ್ತಿರುವ ಬಗ್ಗೆ ಸಾರ್ವಜನಿಕರಿಂದ ದೂರುಗಳು ಬರುತ್ತಿದ್ದು ಈ ಬಗ್ಗೆ ಪರಿಶೀಲನೆ ಮಾಡಲಾಗಿ ಈಗ ಹಾಲಿ ಇರುವ ಪಾರ್ಕಿಂಗ್ ವ್ಯವಸ್ಥೆಯಿಂದಾಗಿ ಸಂಚಾರ ದಟ್ಟಣೆಗೊಂಡು ಸಂಚಾರ ಸ್ಥಗಿತಗೊಳ್ಳುತ್ತಿರುವುದು ಕಂಡುಬಂದಿದೆ. ಆದ್ದರಿಂದ ಸಾರ್ವಜನಿಕ ಹಿತಾಸಕ್ತಿ ಮೇರೆಗೆ ಹಾಲಿ ಇರುವ ಪಾರ್ಕಿಂಗ್ ವ್ಯವಸ್ಥೆಯನ್ನು ಪೂರ್ವ ದಿಕ್ಕಿನಿಂದ ಪಶ್ಚಿಮ ದಿಕ್ಕಿಗೆ ಬದಲಾಯಿಸಿ ವ್ಯವಸ್ಥೆ ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. ಕೇಂಬ್ರಿಡ್ಜ್ ರಸ್ತೆಯ 1ನೇ ಕ್ರಾಸ್ ರಸ್ತೆಯಲ್ಲಿ ಮನೆ ನಂ. 20/2 ಬಳಿಯಿಂದ ಜಿ.ಎಂ. ಹೆಲ್ತ್‌ಕೇರ್ ಗೇಟ್ ವರೆಗೆ ದ್ವಿಚಕ್ರ ವಾಹನಗಳಿಗೆ ಹಾಗೂ ಜಿ.ಎಂ. ಹೆಲ್ತ್‌ಕೇರ್ ಗೇಟ್‌ನಿಂದ ಮುಂದಕ್ಕೆ ನಾಲ್ಕು ಚಕ್ರ ವಾಹನಗಳಿಗೆ ಪಾರ್ಕಿಂಗ್ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ.
2. ಕೇಂಬ್ರಿಡ್ಜ್ ರಸ್ತೆಯ 1ನೇ ಕ್ರಾಸ್ ರಸ್ತೆಯಲ್ಲಿ ಪೂರ್ವ ದಿಕ್ಕಿನಲ್ಲಿ ಸಂಪೂರ್ಣವಾಗಿ ವಾಹನ ನಿಲುಗಡೆಯನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 07.08.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 5.08.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 1208 ಪೊಲೀಸ್ ಕಮೀಷನರ್, ಬೆಂಗಳೂರು ನಗರ.